ಸಂಜೀವಿನಿ ಪ್ರಕಾಶನ ೫

ಈ ವರುಷದ ಕೊನೆಯ ಗ್ರಂಥ

# (ದೇವಗಾನ)

(ಕಥಾಸಂಕಲನ.)


ಕತೆಗಾರ್ತಿ

ಶ್ರೀ. ಕು. ಸೌ. ರತ್ನಮ್ಮ. ಮದರಾಸು.



ಸಂಜೀವಿನಿ ಪ್ರಕಾಶನ, ಹುಬ್ಬಳ್ಳಿ.

೧೯೪೭] [೧-೮-೦

## ಸಂಜೀವಿನಿ ಪ್ರಕಾಶನ ಹುಬ್ಬಳ್ಳಿ.

ಸಂಪಾದಕರು:— **ಕಲವುದಾನಿ ಗುರುರಾಯರು**

ಸುಮಾರು ೬೦೦ ಪುಟಗಳಲ್ಲಿಳ ಗ್ರಂಥಗಳು.

ಚಂದಾ ೫—೦—೦ ಮಾತ್ರ (ಅಂಚೀವೆಚ್ಚ ಸೇರಿ.)

ನಮ್ಮ ಪ್ರಕಟನೆಗಳು:—

೧ **ಗ್ರಾಮಪಂಚಾನನ**(ಕಾದಂಬರಿ) ಬಾ. ಕೃ. ಲಕ್ಷ್ಮೇಶ್ವರ ೨-೦-೦

೨ **ವಿಧಿ ತಂದ ವಧು** (ಕಾದಂಬರಿ) ಪಿ. ವೆಂಕೋಬಾಚಾರ್ಯ ೧-೮-೦

೩ **ಅತಿಮಾನವ** (ಕಾದಂಬರಿ) ದ. ಲ. ಕೆದೂರ ೨-೦-೦

ಮಾರಾಟಗಾರರು:—

**ಮನೋಹರ ಗ್ರಂಥ ಭಾಂಡಾರ, ಧಾರವಾಡ.**

**ಕನ್ನಡ ಪುಸ್ತಕಾಲಯ ಬೆಳಗಾವಿ.**

ಪ್ರಕಾಶಕರು:
**ಸಿ. ಎಸ್. ಬೆಂಡಿಗೇರಿ.**
ಹುಬ್ಬಳ್ಳಿ.

ಮುದ್ರಕರು
**ಸಿ. ಎಸ್. ಬೆಂಡಿಗೇರಿ.**
ಮುದ್ರಣಾಲಯ
ವಾಗ್ವಿಲಾಸ ಪಾವರ ಪ್ರಿಂಟಿಂಗ್ ಪ್ರೆಸ್,
ಹುಬ್ಬಳ್ಳಿ.

# ಪರಿವಿಡಿ.


೧. ದೇವಗಾನ .... ೧

೨. ಗೋಪಾಲ ಬಾ .. ೧೫

೩. ಮೂಗುಬೊಟ್ಟು .... ೨೨

೪. ರೇಶನ್ನ .... ೨೯

೫. ತಾಯಿ .... ೩೮

೬. ಅತಿಥಿ .... ೪೩

೭. ಶುಕ್ರವತಿ .... ೪೭

೮. ಮೂರನೇಗುಂಡಿ .... ೫೨

೯. ನಾಲಿಗಿಲ್ಲದ ಗುಬ್ಬಿ .... ೫೭

೧೦. ಕಾಮುಕಸ್ತೂರಿ ಕುಂಡೆ .... ೬೩

೧೧. ಹೆರವರ ವಿಲಾಸ .... ೬೮

೧೨. ಸುಖ .... ೭೩

೧೩. ಮುಸುಕು .... ೭೯

೧೪. ಸತಿ ಸಾವಿತ್ರಿ .... ೮೪

# ಸಂಪಾದಕನ ಮಾತು.

ಸಂಜೀವಿನಿ ಪ್ರಕಾಶನದ ಈ ವರುಷದ ಕೊನೆಯ ಅಂದರೆ ೪ ನೆಯ ಪುಸ್ತಕವೆಂದು "ಜೀವಗಾನ" ಎಂಬ ಕಥಾ ಸಂಕಲನವನ್ನು ಓದುಗರಿಗೆ ಕೊಡಲು ನನಗೆ ಬಹಳ ಸಂತೋಷವಾಗುವದು. ಅಂತೂ ನಾವು ಸುಖರೂಪವಾಗಿ, ಕಾಗದದ ತುಟಾಗ್ರತೆ, ಕಚ್ಚುಕೊಟದ ಅನಾನುಕೂಲತೆ ಪ್ರಕಾಶನದ ಅಸಹಾಯತೆ ಮೊದಲಾದವುಗಳನ್ನು ದಾಟಿ ಬಂದೆವೆಂಬ ಉಬ್ಬು ಇದ್ದೇ ಇದೆ. ನಮ್ಮ ಚಂದಾದಾರರು ಉದಾರ ಹೃದಯತೋರಿ ನಮ್ಮ ಸಾಹಿತ್ಯ ಸೇವೆಯಲ್ಲಿ ಬಹಳ ಸಹಾಯ ನೀಡಿದರು. ಅವರ ಈ ಉದಾರತೆಯು ಇಲ್ಲದಿದ್ದರೆ ನಾವು ಇಲ್ಲಿಯವರೆಗೆ ಬಂದು ಮುಟ್ಟುತ್ತಿರಲೇ ಇಲ್ಲ. ಈಗಿನಂತೆ ಮುಂದಿನ ವರುಷವೂ ಸಕಲ ಕನ್ನಡ ನುಡಿಯ ಭಕ್ತರು ಸಂಜೀವಿನಿ ಪ್ರಕಾಶನಕ್ಕೆ ಚಂದಾದಾರರಾಗಿ ನಮಗೆ ನೆರವಾಗಬೇಕೆಂದು ಬೇಡಿಕೊಳ್ಳುವೆವು.

'ಜೀವಗಾನ'ದಲ್ಲಿ ಒಟ್ಟು ೧೪ ಕತೆಗಳಿವೆ. ಮೊದಲನೆಯ ಕತೆಯ ಹೆಸರಿನಿಂದಲೇ ಈ ಗ್ರಂಥವನ್ನು ಕತೆಗಾರ್ತಿಯು ಕರೆದಿದ್ದಾರೆ. ಒಂದನೆಯದು ಮತ್ತು ಕಡೆಯದು ಸ್ವತಂತ್ರ ಕತೆಗಳು. ಇವೆರಡರಲ್ಲಿಯೂ ಕತೆಗಾರ್ತಿಯು ತಮ್ಮಲ್ಲಿಯ ಕಲಾನೈಪುಣ್ಯವನ್ನು ಚನ್ನಾಗಿ ತೋರಿಸಿದ್ದಾರೆ. ಸ್ತ್ರೀ ಹೃದಯವನ್ನು ಪೂರ್ಣ ಬಿಚ್ಚಿಟ್ಟಿದ್ದಾರೆ. ಸ್ತ್ರೀಯು ಜಗತ್ತನ್ನು, ವಿಶೇಷವಾಗಿ ಪುರುಷನನ್ನು, ನೋಡುವ ಬಗೆ ಇಲ್ಲಿ ಪೂರ್ತಿಯಾಗಿ ಚಿತ್ರಿಸಲ್ಪಟ್ಟಿದೆ. ಎರಡರಿಂದ ಒಂಬತ್ತರ ವರೆಗಿನ ಅಂದರೆ ಏಳು ಕತೆಗಳು ತಮಿಳು ಕತೆಗಳ ಭಾವಾನುವಾದಗಳು. ಅವುಗಳ ಅನುವಾದವು ಹೇಗಾಗಿದೆಯೆಂಬುದನ್ನು ತಮಿಳು ಬಲ್ಲವರೇ ಹೇಳಬೇಕು. ಒಂಬತ್ತರಿಂದ ಹದಿನಾಲ್ಕರವರೆಗೆ ಅಂದರೆ ಐದು ಕತೆಗಳು ಇಂಗ್ಲೀಷದ ಭಾಷಾಂತರಗಳು. ಭಾಷಾಂತರವು ಮೂಲದ ಅರ್ಥಗಾಂಭೀರ್ಯ ಮತ್ತು ಅವುಗಳ ಗತಿಗಳಷ್ಟೇ ಬಿಗುವಾಗಿ ಕನ್ನಡಕ್ಕೆ ಕತೆಗಾರ್ತಿಯು ಇಳಿಸಿದ್ದಾರೆಂದು ನಾವು ಹೇಳಬಲ್ಲೆವು.

ಈ ರೀತಿ ಈ ಗ್ರಂಥವನ್ನು ತಯಾರಿಸಿಕೊಟ್ಟವರು ನಮ್ಮ ಭಗಿನಿ ಶ್ರೀಮತಿ. ಕು. ಸೌ. ರತ್ನಮ್ಮನವರು. ಸಾಹಿತ್ಯ ಲೋಕಕ್ಕೆ ಇವರು ಅಪರಿಚಿತರೂ ಅಲ್ಲ. ಹೊಸಬರೂ ಅಲ್ಲ. ಈಗ ಸುಮಾರು ಪತ್ತು ವರುಷಗಳಿಂದಲೂ ಅವರು ಕತೆಗಳನ್ನು ಆಗಾಗ ಬರೆಯುತ್ತಿದ್ದಾರೆ. ಇವರು ಬರೆದ ಎಲ್ಲಕ್ಕೂ ಮೊದಲಿನ ಕತೆ "ಇನ್ನು ಒಂದೇ ನಿಮಿಷ" ಎಂಬುದು 'ಕತೆಗಾರ'ದಲ್ಲಿ ಅಚ್ಚಾಗಿದೆ. ಧಾರವಾಡದ ಮನೋಹರ ಗ್ರಂಥ ಭಾಂಡಾರದವರು ಪ್ರಕಟಿಸಿದ 'ರಂಗವಲ್ಲಿ' ಎಂಬ ಕಥಾಸಂಕಲನದಲ್ಲಿ 'ಬಂಗಾರದ ಬಳೆ' ಎಂಬ ಕತೆಯನ್ನು ಇವರು ಬರೆದಿದ್ದಾರೆ.

ಶ್ರೀ. ಕು. ಸೌ. ರತ್ನಮ್ಮನವರು ರಾವ ಬಹದ್ದೂರ ಎ. ಅಚ್ಚುತರಾವ. ಡಿಸ್ಟ್ರಿಕ್ಟ ಎಲೆಕ್ಟ್ರಿಕ್ ಎಂಜಿನಿಯರ. ಎಂ ಎಸ್. ಎಂ. ರೇಲ್ವೆ ಮದ್ರಾಸು ಇವರ ಮಕ್ಕಳು. ೧೯೦೨ರಲ್ಲಿ ಬೆಂಗಳೂರ ಹತ್ತಿರದ ಒಂದು ಹಳ್ಳಿಯಲ್ಲಿ ಹುಟ್ಟಿದರು. ತಮಿಳು ಜನೆಯ ಇಯತ್ತೆಯ ವರೆಗೆ ಕಲಿತಿದ್ದಾರೆ. ೧೯೩೫ ರಲ್ಲಿ ಇವರ ವಿವಾಹವಾಯಿತು. ಇವರ ಪತಿ. ಎಚ್. ಸೀತಾರಾಮರಾವ. D. Sc. ಇವರು ಲಖನೌ ಯುನಿವ್ಹರ್ಸಿಟಿಯಲ್ಲಿ M. Sc. D. Sc. ಡಿಗ್ರಿ ಪಡೆದು, ಬೆಂಗಳೂರ ಹತ್ತರ ಹೆಸರುಘಟ್ಟ ಎಂಬ ಹಳ್ಳಿಯಲ್ಲಿಯ ಫ್ರುಟರೀಸರ್ಚ ಸ್ಟೇಶನದಲ್ಲಿ ಐದು ವರುಷಗಳ ವರೆಗೆ ಸಾಯಂಟಿಫಿಕ್ ಅಸಿಸ್ಟಂಟ ಎಂದು ಕೆಲಸ ಮಾಡಿದರು. ಆ ಮೇಲೆ ಡೆಹರಾಡೂನದಲ್ಲಿ ಫೋರೆಸ್ಟರೀಸರ್ಚ ಇನ್‌ಸ್ಟಿಟ್ಯೂಟದಲ್ಲಿ ಎಕಾನಾಮಿಕ್ ಬೊಟೊನಿಸ್ಟ, ಆಯಿಲ್ಲ ಎಥ್ವಾಯಜಿಂಗ ಕಮೀಟಿಯಲ್ಲಿ ಎರಡು ವರುಷ ದುಡಿದರು. ಮುಂದೆ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಅವರು ಅಮೇರಿಕೆಗೆ ಒಂದೂವರೆ ವರುಷದ ಹಿಂದೆ ಗವ್ಹರ್ನಮೆಂಟ ಓವ್ಹರ್ಸೀಯರ್ ಸ್ಕಾಲರಶಿಪ್ ತೆಗೆದುಕೊಂಡು ಹೋಗಿದ್ದಾರೆ. ಡಾ. ಎಚ್. ಸೀತಾರಾಮರಾಯರು ಸಾಹಿತಿಗಳು. ಪ್ರಬುದ್ಧ ಕರ್ನಾಟಕ, ಜಯಕರ್ನಾಟಕಗಳಲ್ಲಿ ೧೯೩೧ ರಿಂದ ಆಗಾಗ ಬರೆಯುತ್ತಿದ್ದಾರೆ. ಅವರು ಅಮೇರಿಕೆಯನ್ನು ಕಂಡ ರೀತಿಯಲ್ಲಿ ಕಾದಂಬರಿಗಳನ್ನೂ ಲೇಖನಗಳನ್ನೂ ಕೊಡುವವರಿದ್ದಾರೆ. ಅದಕ್ಕಾಗಿ ನಾವು ದಾರೀಕಾಯುತ್ತಲಿದ್ದೇವೆ.

ಇಂಥವರ ಪತ್ನಿ ಶ್ರೀಮತಿ ರತ್ನಮ್ಮನವರು. ಮೂವರು ಮಕ್ಕಳನ್ನು "ನೋಡಿ"ಕೊಂಡು ಮನೆಯಲ್ಲಿ ಇಂಗ್ಲೀಷ ಕಲಿತಿದ್ದಾರೆ. ಲಲಿತ ಕಲೆಗೆ ಇವರ ಒಲವು ಬಹಳ. ಸಾಹಿತ್ಯ ರಸಾಸ್ವಾದನೆಯ ಅಭಿಲಾಷೆಯು ಇವರನ್ನು ಸಾಹಿತ್ಯ ಸೇವೆಗೆ ಎಳೆದಿದೆ. ಈಗ ಮೂರು ತಿಂಗಳ ಹಿಂದೆ ಶ್ರೀಮತಿಯವರು ನಮ್ಮ ಮನೆಗೆ ಬಂದಾಗ "ಸಂಜೀವಿನಿ ಪ್ರಕಾಶನಕ್ಕೆ ಏನಾದರೂ ಬರೆದುಕೊಡುವಿರಾ?" ಎಂದು ಕೇಳಿಕೊಂಡೆನು. "ಆಗಲಿ" ಎಂದು ಮುಗುಳುನಗೆ ಸೂಸಿದರು. ಎರಡು ಸ್ವತಂತ್ರ ಕತೆಗಳನ್ನು ಹೆಣೆದು ಏಳು ತಮಿಳು ಕತೆಗಳನ್ನೂ ಐದು ಇಂಗ್ಲೀಷ ಕತೆಗಳನ್ನೂ ಭಾಷಾಂತರಿಸಿ ಒಂದು ಪುಸ್ತಕ ರೂಪದಲ್ಲಿ ವೇಳೆಗೆ ಸರಿಯಾಗಿ ನಮಗೆ ಕೊಟ್ಟರು. ಅದಕ್ಕಾಗಿ ಅವರಿಗೆ ನಾವು ಯಾವಾಗಲೂ ಋಣಿ. ಈ ವರುಷದ ೪ ನೆಯ ಅಂದರೆ ಕೊನೆಯ ಪುಸ್ತಕವೆಂದು ಶ್ರೀ ಜಿ. ಎನ್. ಕೆಯವರ 'ಕುಡುಕರು' ಎಂಬ ಕಾದಂಬರಿಯನ್ನು ಕೊಡುವೆನೆಂದು ನಾವು ಅಂದಿದ್ದೆವು. ಆದರೆ ಅದು ಸಕಾಲಕ್ಕೆ ನಮ್ಮಲ್ಲಿಗೆ ಬರಲಿಲ್ಲ. ಶ್ರೀ. ಕು. ಸೌ. ರತ್ನಮ್ಮನವರ ಕಥಾ ಸಂಕಲನವು ನಮಗೆ ತಲುಪಿತು. ಇದನ್ನು ಓದುಗರಿಗೆ ಕೊಟ್ಟೆವು.

ವೇಳೆಗೆ ಸರಿಯಾಗಿ ಅಚ್ಚುಮಾಡಿ ಪ್ರಕಟಗೊಳಿಸಿದ ಶ್ರೀ. ವಾಗ್ವಿಲಾಸ ಪಾವರ ಪ್ರಿಂಟಿಂಗ ಪ್ರೆಸ್ಸದ, ಒಡೆಯರಿಗೆ ವಂದನೆಗಳು.

**ಕಲಮದಾನಿ ಗುರುರಾಯ**

## ಒಡೆಯನ ನುಡಿ.

ಈ ಸಂಜೀವಿನಿ ಪ್ರಕಾಶದ ಒಡೆಯನು ನಾನೆಂದು ನಾನೇ ಹೇಳಿಕೊಳ್ಳುವದು ಒಂದು ವಿನೋದದ ಪ್ರಸಂಗವು. ಸಂಪಾದಕರೇ ಇದನ್ನು ಹೇಳಬೇಕಾಗಿತ್ತು. ಆದರೆ ಅವರು ನನಗೆ ಈ ಕೆಲಸ ಒಪ್ಪಿಸಿದರು. ಸರಿ. ಈ ಪ್ರಕಾಶನಕ್ಕೆ ಒಡೆಯನಾದ ನಾನು, ನನ್ನ ಪ್ರಥಮ ಕರ್ತವ್ಯವೆಂದು ಏನೂ ಗೌರವ ಧನವನ್ನು ಪಡೆಯದೇ ಸಂಪಾದಕತ್ವದ ಹೊಣೆಯನ್ನು ಹೊತ್ತು

ಮೂರು

ಒಂದು ವರುಷದ ವರೆಗೆ ಮಡಿಚ ನನಗೆ ಹಿರಿಯರಾದ ಶ್ರೀ ಕಲಮುದಾನಿ ಗುರುರಾಯರಿಗೆ ವಂದನಗಳನ್ನರ್ಪಿಸುವೆನು.

ಈ ಪ್ರಕಾಶನವನ್ನು ಪ್ರಾರಂಭಿಸಲು ಪ್ರೇರಕರಾದ,ವೇ. ಶೇಷಾಚಾರ್ಯ ಜೋಶಿ, ಶ್ರೀ. ಮಾಧವರಾವ ಮಂಗಳವೇಢೆಯವರಿಗೆ ವಂದನೆಗಳು.

ಪ್ರಕಾಶನಕ್ಕೆ ಅನುಕೂಲ ಮಾಡಿಕೊಟ್ಟ ಶ್ರೀ. ಬಿ. ಜಿ. ಸಂಕೇಶ್ವರ ಗದಗ, ಮತ್ತು ಸಿ. ಎನ್. ಬೆಂಡಿಗೇರಿ, ಹುಬ್ಬಳ್ಳಿ ಇವರಿಗೂ, ಕಾಗದದ ತುಟಾಗ್ರತೆಯಕಾಲದಲ್ಲಿ ಸಕಾಲಕ್ಕೆ ಕಾಗದ ಒದಗಿಸಿಕೊಟ್ಟ ಮೆ: ಕೆಸ್ವಾಯಿನ ಎಂಡ ಸನ್ಸರವರಿಗೂ ಅನೇಕ ವಂದನೆಗಳು.

ಪ್ರಕಾಶನದ ಆರಂಭದಿಂದಲೂ ಹೆಜ್ಜೆ ಹೆಜ್ಜೆಗೆ ಸಹಾಯ, ಸೂಚನೆ, ಉತ್ಸಾಹಗಳನ್ನು ಕೊಟ್ಟ, ಈಗಲೂ ಕೊಡುತ್ತಿರುವ "ಜಯಂತಿ" ಸಂಪಾದಕರಾದ ಕವಿಭೂಷಣ ಕೃಷ್ಣಶರ್ಮ ಬೆಟಗೇರಿಯವರಿಗೂ, ಲಲಿತ ಸಾಹಿತ್ಯ ಮಾಲೆಯಸಂಪಾದಕರಾದ ಗೋವಿಂದರಾವಚುಳ್ಕಿಯವರಿಗೂ "ಜಯಹಿಂದ" ಸಹ ಸಂಪಾದಕರಲ್ಲೊಬ್ಬರಾದ ರಂ. ಬಾ. ಮನಗೂಳಿ ಯವರಿಗೂ, ಕಲಿಯುಗದ ಸಂಪಾದಕರಾದ ಡಾಕ್ಟರ. ಮ. ಗೋಪಾಲ ಕೃಷ್ಣರಾಯರಿಗೂ ಅನಂತ ವಂದನೆಗಳು.

ಪ್ರಕಾಶನದ ಪ್ರಚಾರ ಕಾರ್ಯದಲ್ಲಿ ನಮಗೆ ಭುಜಕ್ಕೆ ಭುಜಕೊಟ್ಟು ನಮ್ಮಕೂಡ ಕೆಲಸಮಾಡಿ ಸಹಾಯವನ್ನಿತ್ತ National Photo Arts Studio, Hubliಯ ಒಡೆಯರಾದ ಎಸ್. ಎಚ್. ಆದವಾನಿಯವರಿಗೂ ಪ್ರಕಾಶನ ಗ್ರಂಥಗಳು ಹೊರಡುವ ಪೂರ್ವದಲ್ಲಿಯೇ Sole Agency ತೆಗೆದುಕೊಳ್ಳಲು ಒಪ್ಪಿ ಆ ರೀತಿ ಮುಂದ ಪುಸ್ತಕ ಮಾರಿ ಕೊಟ್ಟ ಮನೋಹರ ಗ್ರಂಥ ಭಾಂಡಾರ ಧಾರವಾಡ, ಕನ್ನಡ ಪುಸ್ತಕಾಲಯ ಬೆಳಗಾವಿ, ಇವುಗಳ ಒಡೆಯರಿಗೂ ಅನೇಕ ವಂದನೆಗಳು.

ಕೇಳಿದ ವೇಳೆಗೆ ಸರಿಯಾಗಿ ಗ್ರಂಥಗಳನ್ನು ಬರೆದುಕೊಟ್ಟ ಶ್ರೀ ಪ್ರಲ್ಹಾದರಾವ ನರೇಗಲ್ಲ (ನಸುಕು. ಕವನ) ಬಾ. ಕೃ. ಲಕ್ಷ್ಮೇಶ್ವರ (ಗ್ರಾಮ ಪಂಚಾನನ. ಕಾದಂಬರಿ) ಪಿ. ವೆಂಕೋಬಾಚಾರ್ಯ, (ವಿಧಿ ತಂದ

ವಧು. ಕಾದಂಬರಿ) ಶ್ರೀ ಕುಂ. ಸೌ. ರತ್ನಮ್ಮನವರು (ದೇವಗಾನ) ಇವ ರೆಲ್ಲರಿಗೂ, ಇನ್ನು ಮುಂದೆ ಬರೆದು ಕೊಡುವೆವೆಂದು ವಚನವಿತ್ತ ಎಲ್ಲ ಸಾಹಿತಿಗಳಿಗೂ ವಂದನೆಗಳು. (ಸಂಜೀವಿನೀ ಪ್ರಕಾಶನ ಕಾರ್ಯಕ್ಕೆ ಶುಭವಾಗಲೆಂದು ಎಲ್ಲಕ್ಕೂ ಮೊದಲು ಶ್ರೀ ನರೇಗಲ್ಲ ಪ್ರಲ್ಹಾದರಾಯರು "ಪದ್ಯ" ವನ್ನಂದರು. ಅವೇ "ನಸುಕು"ನಸುಕುನ್ನು ಬಡಿಯಾಗಿಯೇ ಇಟ್ಟು ಪ್ರಕಾಶನದ ಚಂದಾದಾರರಿಗೆ ಗ್ರಾಮಪಂಚಾನನದಿಂದಲೇ ಕಾದಂಬರಿ ಗಳನ್ನು ಕೊಡಲು ನಮ್ಮ ಸಂಪಾದಕರು ನಿಶ್ಚಯಿಸಿದರು. ಹಾಗೆ ಕೊಡು ತ್ತಲೂ ಬಂದರು.)

ಸಕಾಲಕ್ಕೆ ತಮ್ಮ ಅಚ್ಚುಕೂಟದಲ್ಲಿ ನಮ್ಮ ಪ್ರಕಾಶನದ ಗ್ರಂಥ ಗಳನ್ನು ಅಚ್ಚು' ಹಾಕಿಕೊಟ್ಟ ಹುಬ್ಬಳ್ಳಿ ವಾಗ್ವಿಲಾಸ ಪಾವರ ಪ್ರಿಂಟಿಂಗ ಪ್ರೆಸ್ಸದ ಒಡೆಯರಿಗೆ ನಮ್ಮ ಅನೇಕ ವಂದನೆಗಳು.

ಇವೆಲ್ಲವುಗಳಿಗಿಂತಲೂ ಹೆಚ್ಚಿನದು, ಪ್ರಕಾಶನವು ಬಾಲ್ಯಾವಸ್ಥೆ ಯಲ್ಲಿದ್ದರೂ ಕನ್ನಡ ಸಾಹಿತ್ಯ ಭಕ್ತರು ಮುಂದೆ ಬಂದು ನಮ್ಮಲ್ಲಿ ಪ್ರೀತಿ ವಿಶ್ವಾಸಗಳನ್ನು ತೋರಿ, ಸಹಾಯ ಹಸ್ತ ನೀಡಿ, ಪ್ರಕಾಶನಕ್ಕೆ ಗ್ರಾಹಕ ರಾಗಿ ಒಂದು ವರುಷಕಾಲ ಸುರಕ್ಷಿತವಾಗಿ ನಮ್ಮನ್ನು ಕಾಪಾಡಿದರು. ಅವರ ಉಪಕಾರ ನಮ್ಮ ಮೇಲೆ ಬಹಳವಾಗಿದೆ. ಸಂಜೀವಿನಿ ಪ್ರಕಾಶನದ ಎಲ್ಲ ಚಂದಾದಾರರಿಗೂ, ಓದುಗರಿಗೂ, ಹಿತ ಚಿಂತಕರಿಗೂ, ಸಹೃದ ಯರಿಗೂ ಅನಂತಾನಂತ ವಂದನೆಗಳು. ಈ ವರುಷ ನಮ್ಮನ್ನು ಎತ್ತಿ ಹಿ ಡಿದಂತೆ ಸದಾ ನಮ್ಮನ್ನು ಕಾಪಾಡಬೇಕೆಂದೂ, ಉದಾರರಾದ ಚಂದಾ ದಾರರು (ತಾವಿರುವದಲ್ಲದೇ) ತಮ್ಮ ಪರಿಚಿತರಿಗೆ ಚಂದಾದಾರರಾಗಲು ಸೂಚಿಸಿ ಸಾಹಿತ್ಯ ಸೇವೆಯನ್ನು ನಮ್ಮಿಂದ ಇದಕ್ಕೂ ಹೆಚ್ಚು ಮಾಡಿಸ ಬೇಕೆಂದು ಬೇಡುವೆವು.

ಮೊದಲನೆಯ ವರುಷ, ಎಷ್ಟೆಂದರೂ ಮೊದಲನೆಯ ವರುಷವೇ, ಗ್ರಂಥಕಾರರಿಗಾಗಲೀ, ಸಂಪಾದಕರಿಗಾಗಲೀ ಗೌರವಾರ್ಥವಾಗಿಯಾದರೂ ನಾವು ಏನೂ ಸಲ್ಲಿಸಲಿಲ್ಲ. ಅದಕ್ಕೆ ಪ್ರಕಾಶನದ ಆರ್ಥಿಕ ಸ್ಥಿತಿಯೇ

ಐದು

ಕಾರಣ. ಎರಡನೆಯ ವರುಷ ತುಸುವಾದರೂ ಕೊಡಬೇಕೆಂದಿದ್ದೇವೆ. ಅವರಿಗೆ ಕೊಡಿಸುವದು ಗ್ರಾಹಕರಾದ ತಮ್ಮನ್ನೇ ಕೂಡಿದೆ.

ಈ ವರುಷ ೫-೦-೦ ಚಂದಾಹಣದಲ್ಲಿ ೬೦೦ ಪಾನಿನ ಗ್ರಂಥಗಳನ್ನು ಕೊಡುವೆವೆಂದಿದ್ದೆವು. ಅವುಗಳಿಗಿಂತ ತುಸು ಹೆಚ್ಚೇ ಕೊಟ್ಟೆವು. ಎರಡನೆಯ ವರುಷ ಈಗಿನ ಕಿಂತಲೂ ಹೆಚ್ಚು ಪುಟಗಳನ್ನು ೫-೦-೦ ಚಂದಾಹಣದಲ್ಲಿಯೇ ಕೊಡಬೇಕೆಂಬ ಆಶೆಯಿದೆ. ಈ ಆಶೆಯನ್ನು ಈಡೇರಿಸುವುದು ನಿಮ್ಮ ಕೈಯಲ್ಲಿದೆ.

ತಮ್ಮ ಸೇವಕ,

ಹುಬ್ಬಳ್ಳಿ
೧-೧೦-೧೯೪೭. } **ಮೋಹನ ಕೃಷ್ಣರಾವ ಮುಕ್ತಾಲಿ.**

---

## ಹೊಸ ವರುಷದಲ್ಲಿ ಪ್ರಕಟವಾಗಲಿರುವ ಗ್ರಂಥಗಳು.

೧. ಉತ್ಕಲಾ (ಸಾಮಾಜಿಕ ಕಾದಂಬರಿ) — ೪—೮—೦
ಬರೆದವರು "ಹರಿಜಾತ"

೨. ದರ್ಶನ (ಸಾಮಾಜಿಕ ಕಾದಂಬರಿ) — ೨—೦—೦
ಬರಿವರು ಬಿ. ಜಿ. ಕುಲಕರ್ಣಿ B. A. (Hon)

೩. ಕಾಲಚಕ್ರ (ಸಾಮಾಜಿಕ ಕಾದಂಬರಿ) — ೧—೮—೦
ಬರೆದವರು ಡಿ. ಎಚ್. ಕೊಪ್ಪರ M. A.

೪. ಮುದ್ದಿನ ಕುಳ್ಳಿ (ಕತೆಗಳು) — ೧—೮—೦
ಬರೆದವರು ಕೆ. ಆರ್. ಬೆಳ್ಳುಬ್ಬಿ

# ದೇವಗಾನ

ನನಗೆ ಆಗ ವಯಸ್ಸು ಇಪ್ಪತ್ತೆರಡು, ಹೆಣ್ಣು ಮಕ್ಕಳ ಕಾಲೇಜದಲ್ಲಿ B. A. ಕ್ಲಾಸದಲ್ಲಿದ್ದೆ. ಕಾಲೇಜಕ್ಕೆ ಒಂದು ವಸತಿಗ್ರಹವಿತ್ತು. ಅಲ್ಲಿ ನಾನಿದ್ದೆನು. ನನ್ನ ಸ್ವಭಾವ "ವಿಲಕ್ಷಣ" ಎನ್ನುವರು. ಅದಕ್ಕಂತಲೇ ಏನೋ ವಸತಿಗ್ರಹದಲ್ಲಿದ್ದರೂ ನನಗೆ ಸ್ನೇಹಿತರಾರೂ ಇರಲಿಲ್ಲ. ಸರೋಜಳು ಮಾತ್ರ, ಏಕೋ ತಿಳಿಯದು, ನನ್ನ ಪ್ರಾಣದ ಗೆಳತಿಯಾಗಿದ್ದಳು.

ನಮ್ಮ ಕಾಲೇಜದ ಅಟ್ಟದ ಮೇಲೆಯೇ ನಮ್ಮ ವಸತಿಗ್ರಹದ ಕೋಣೆಗಳಿರುವವು. ಕೆಳಗೆ ಕ್ಲಾಸು ಮುಗಿದೊಡನೆ ಮೇಲೆ ಬಂದು ಬಿಡುತ್ತಿದ್ದೆ. ನನ್ನ ವರ್ಗದ ಹುಡಿಗೆಯರು ಕ್ಲಾಸಿನಲ್ಲಿ ನಡೆದ ವಿಷಯವಾಗಿ ಏನಾದರೂ ಕೇಳಿದರೆ ನಾನು ತಿಳಿದುಕೊಂಡಷ್ಟು ಹೇಳಿ ಮೇಲೆ ಓಡಿಯೇ ಬಿಡುವೆನು. ಫಲಹಾರ ಮುಗಿಸುವೆನು. ಹಾಗೆಯೇ ತೋಟದಲ್ಲಾಗಲೀ, ಆಟದ ಬೈಲಿನಲ್ಲಾಗಲೀ, ಅಲೆದಾಡಲು ಸಾಗುತ್ತಿದ್ದೆ. ಒಮ್ಮೊಮ್ಮೆ ಎಲ್ಲಿ ಹೋಗಲೂ ಮನಸ್ಸಾಗದು, ಆಗ ಕೋಣೆಯ ಮುಂದಿನ ಪಟಾಂಗಣದಲ್ಲಿ ಹೆಜ್ಜೆಯಲ್ಲಿ ಹೆಜ್ಜೆ ಇಕ್ಕಿ ತಿರುಗುವೆ.

ಆಟವೆಂದರೆ ಎಲ್ಲರಿಗೂ ಬೇಕಾದದ್ದು. ನನಗೆ ಅದರಲ್ಲಿ ಆಸ್ಥೆ ಏನೂ ಇಲ್ಲ, ಆದರೂ ನನ್ನ ಗಳತಿಯು ಜುಲುಮೆಗಾಗಿ ಆಟದಲ್ಲಿ ಸೇರಿದರೆ ನನ್ನ ಪಾಲಿಗೆ ಸೋಲು ಕಟ್ಟಿಟ್ಟದ್ದು. ಆಟ ಆಡುವದರಲ್ಲಿ ಜನರೇಕೆ ವೇಳೆ ಹಾಳು ಮಾಡುವರು ಎಂದು ನನಗೆ ಅನಿಸುವದು. ಇದೊಂದು ವಿಷಯದಲ್ಲಿ ಸರೋಜ ನನ್ನ ಪ್ರತಿಕಕ್ಷಿ, ಅವಳು ಯಾವಾಗಲೂ ಆಟದ ವಿಷಯವಾಗಿಯೇ ಮಾತಾಡುವಳು. ಮಾತಿಗೊಮ್ಮೆ ನಗುವಳು, ಎಲ್ಲಿಯಾದರೂ ಗದ್ದಲ ನಗು ಕೇಳ ಬಂದರೆ ಅಲ್ಲಿ ಸರೋಳಿದ್ದೇ ಇರುವಳು.

ಸರೋಜಳು ಎಲ್ಲ ಆಟದಲ್ಲಿಯೂ ಮುಂದೆ, ಚದುರಂಗ, ಕೇರಂ, ಬ್ಯಾಡ್ಮಿಂಗಟನ ಮೊದಲಾದ ಆಟಗಳ ಮ್ಯಾಚದಲ್ಲಿ ಬೆಳ್ಳಿಬಟ್ಟಲಗಳನ್ನು ಸಂಪಾದಿಸಿದ್ದಾಳೆ. ಅವಳ ಮೇಜಿನ ಮೇಲೆ ಪುಸ್ತಕಗಳಿಗಿಂತ ಅವೇ ಎದ್ದು ಕಾಣುವವು.

ಆದಿನ ರಾತ್ರಿ ಬೆಳ್ಳ ಬೆಳದಿಂಗಳು. ಆ ಬೆಳದಿಂಗಳಲ್ಲಿ ಪ್ರಪಂಚವೇ ಶೂನ್ಯವಾಗಿರುವಂತೆ ಕಂಡಿತು. ಸಮುದ್ರದ ಅಲೆಗಳು "ಬಾ" ಎಂದು ಕೂಗುವಂತೆ ಭೋರ್ಗರೆಯುತ್ತಿದ್ದವು. ಪಾಠಗಳನ್ನು ಮುಗಿಸಿ ಮಲಗುವ ಹೊತ್ತಾಗಿದ್ದರೂ ಪಟಾಂಗಣದಲ್ಲಿ ನಾವಿಬ್ಬರೂ ನಿಂತು ಆ ಸೌಂದರ್ಯವನ್ನು ನೋಡುತ್ತಿದ್ದೆವು.

" ಈದಿನ ಇಡೀ ಊರು ಇಷ್ಟು ಬೇಗ ನಿದ್ರಾವಶವಾದ ಕಾರಣವಾದರೂ ಏನು ! " ಸರೋಜ ನಕ್ಕಳು.

" ಕಾರಣವಿಲ್ಲದೇ ಪ್ರಪಂಚದಲ್ಲಿ ಯಾವ ಕೆಲಸವೂ ಆಗದೆಂಬ ವೇದಾಂತವನ್ನು ನೀನೇ ನನಗೊಂದು ದಿನ ಹೇಳಲಿಲ್ಲವೇ ?

ನಾನು ಮುಗುಳು ನಗೆ ನಕ್ಕು ಸಮ್ಮನಾದೆನು.

" ಬೆಳದಿಂಗಳು ಎಷ್ಟು ರಮ್ಯವಾಗಿದೆ. ಹಾಗೆ ಅಲೆದಾಡಿ ಬರೋಣವೇ"

ಸರೋಜಳೇ ಮಾತು ಮುಂದರಿಸಿದಳು.

" ಅದಕ್ಕೆಲ್ಲಿ ತಾನೇ ನಮಗೆ ಸ್ವಾತಂತ್ರ್ಯ ? ಸುಪರಿಂಟೆಂಡಳ ಸರ್ಪಕಾವಲಿದೆ ಮರೆತೆಯಾ " ಎಂದಳು.

ಹೂಂ....ಸರಿ. ಇಲ್ಲಿಯೇ ಕುಳಿತು ಬೆಳದಿಂಗಳ ಶೋಭೆಯನ್ನು ನೋಡಬಹುದು. ಸಮುದ್ರನಾಥನ ಅರ್ಭಟೆಯ ನೃತ್ಯ ಕಾಣಬಹುದು." ಎಂದವಳೇ ಎರಡು ಖುರ್ಚಿಗಳನ್ನು ಕೋಣೆಯೊಳಗಿಂದ ತೆಗೆದುಕೊಂಡುಬಂದು ಇಟ್ಟಳು.

" ಸಮುದ್ರ ನಾಥ.... ನಾಥ— ಅಹಾ— ಎಂಥ ಸೊಗಸಾದ—" ಈರ್ವರೂ ಖುರ್ಚಿಯ ಮೇಲೆ ಕುಳಿತೆವು.

ತುಸು ಹೊತ್ತು ಇಬ್ಬರೂ ಮಾತಾಡಲಿಲ್ಲ. ಮೆಲ್ಲಗೆ ಗಾಳಿ ಬೀಸುತ್ತಿತ್ತು. ಸಮುದ್ರದ ತೆರೆಗಳು ಕಾಣುತ್ತಿದ್ದವು. ಅದರ ಅರ್ಭಟವು ಕೇಳುತ್ತಿತ್ತು. ಸರೋಜಳು ಏಕೋ ತುಸು ಯೋಚನೆಯಲ್ಲಿದ್ದಂತೆ ಕಂಡಿತು. ಒಂದು ಯಾರದೋ ಮೋಟಾರು ಹಾಯ್ದು ಹೋದಂತೆ ಶಬ್ದವಾಯಿತು. ಗಾಳಿಯ ಜೊತೆಗೆ ಶಬ್ದವೂ ಹನೆಯಲ್ಲುರುಳಿಹೋಯಿತು. ಕೊಳಲಿನ ನಾದ

ಕೇಳಬರತೊಡಗಿತು. ಬಹು ಮಧುರವಾದ ಗಾನವು ಕೊಳಲಿನಿಂದ ಜಾರಿ ನಮ್ಮ ಕಿವಿಗೆ ತಾಗಿತು. ಸರೋಜಳ ಮುಖವರಳಿತು. ಅವಳ ಚಂಚಲ ಕಣ್ಗಳು ವಿಕಸಿತವಾದವು. ನನ್ನನ್ನು ನೋಡಿದವು. "ಎಲ್ಲಿಯೋ ಕೊಳಲೂದುತ್ತಿರುವಂತಿದೆ ...." ಎಂದೆನು. 'ನಡುವೆ ಮಾತಾಡಬೇಡ' ಎಂದು ಸೂಚಿಸುವಂತೆ ಸರೋಜಳು ಸನ್ನೆ ಮಾಡಿದಳು. ಗಾನದಲ್ಲಿ ಇಬ್ಬರೂ ಲೀನರಾದೆವು.

"ನಿಜವಾಗಿಯೂ ಕೊಳಲುಗಾನ ಜಗತ್ತನ್ನು ಲೀನ ಮಾಡಿಬಿಡುವದು. ಈಗಿನ ನಮ್ಮ ಈ ಅನುಭವವನ್ನು ವಿವರಿಸಲು ಶಬ್ದಗಳೇ ಸಿಗಲೊಲ್ಲವು. ಅಲ್ಲವೆ ಲಿಲ್ಲಿ?" ಎಂದಳು ಸರೋಜ.

ಸರೋಜಳು ಬಹಳ ಉತ್ಸಾಹದಲ್ಲಿದ್ದಾಗ, ಸುಖಿಯಾಗಿದ್ದಾಗ ಸಂತೋಷದಲ್ಲಿದ್ದಾಗ ನನ್ನನು "ಲಿಲ್ಲಿ" ಎಂದು ಸಂಬೋಧಿಸುವಳು.

"ನಿಜ ಈ ಕೊಳಲುಗಾನ ನನಗೆ ಕೊಟ್ಟ ಸಂತೋಷವನ್ನು ನಾನಂತೂ ಬಣ್ಣಿಸಲಾರೆ — ಆದರೆ, ಇದು ಎಲ್ಲಿಂದ ಬಂತು? ಯಾವ ಪುಣ್ಯಾತ್ಮನು ಊದುವನು?" ಸರೋಜ ಕೈಸನ್ನೆಯಿಂದ ಎದುರಿಗೆ ತೋರಿಸಿದಳು.

ಕಂದೀಬಣ್ಣದ ಕುತನೀ ಹಾಸಿಗೆಯಂತೆ ಮರಳು ಭೂಮಿ ಉದ್ದಕ್ಕೂ ಹಾಸಿದೆ. ಅದರ ಮೇಲೆ ಈರ್ವರು ತರುಣರು ಕುಳಿತಿರುವರು. ಒಬ್ಬನು ಕೊಳಲು ಬಾರಿಸುತ್ತಿದ್ದನು. ಆ ಗಾನದಲ್ಲಿ ಸರೋಜಳು ಪೂರ್ಣ ಲೀನಳಾಗಿ ಮುಳುಗಿಹೋಗಿದ್ದಳು. ಗಾನಮುಗಿಯಿತು. ಅವರು ಎದ್ದು ಹೊರಟರು. ನಾವು ಚೇತರಿಸಿಕೊಂಡೆವು. ಈ ಲೋಕಕ್ಕಿಳಿದಂತಾಗಿ ಒಬ್ಬರನ್ನೊಬ್ಬರು ನೋಡಿದೆವು. ಸರೋಜಳ ಮುಖವು ಒಂದು ವಿಧವಾಗಿತ್ತು.

"ಲಿಲ್ಲಿ ಡಾ|| ಮುಕುಂದರಾಯರನ್ನು ಬಲ್ಲಿಯಾ?"

"ಈಗೇಕೆ ಒಮ್ಮೆಲೇ ಈ ಪ್ರಶ್ನೆ?"

x x x x

ಸಾಯಂಕಾಲ ಐದು ಗಂಟೆಯ ಸಮಯ. ಕ್ಲಾಸು ಮುಗಿಮುಗಿಯುವಾಗಲೇ ಸರೋಜ ಎದ್ದು ಹೋಗಿಬಿಟ್ಟಳು. ನಾನೂ ಹೊರಡುವದರಲ್ಲಿದ್ದೆ.

"ಏನು ಲಿಲ್ಲೀ ಸರೋಜಳಿಗೇನು? ಮೈಯಲ್ಲಿ ಚನ್ನಾಗಿಲ್ಲವೇ? ಬೆಳಿಗ್ಗೆ ನಿಂದ ಏನೋ ಒಂದು ತರಹ ಆಗಿಬಿಟ್ಟಿದ್ದಾಳೆ. ಎಷ್ಟೋ ಮಾತಾಡಿಸಿದೆ. ಉತ್ತರವೇ ಇಲ್ಲ. ಅವಳ ತುಟಿಗಳಲ್ಲಿ ಯಾವಾಗಲೂ ನಲಿಯುವ ನಗೆಯು ಪೂರ್ಣ ಮಾಯವಾಗಿಬಿಟ್ಟಿದೆ?" ಎಂದಳು ಲೀಲು.

"ನಾನು ಗಮನಿಸಲೇ ಇಲ್ಲವಲ್ಲ!" ಎಂದು ಹೇಳಿ ಸರೋಜಳಲ್ಲಿ ಧಾವಿಸಲು ಹವಣಿಸಿದೆ. ಮನಸ್ಸು ಏಕೋ ಚಂಚಲವಾಯಿತು. ಡಾ|| ಮುಕುಂದರಾಯನ ವಿಷಯವಾಗಿ ನಿನ್ನೆ ಅವಳು ಕೇಳಿದ್ದು ನನಗೆ ಏನೋ ಒಂದು ವಿಪರೀತ ಯೋಚನೆಗೆ ಇಟ್ಟುಕೊಂಡಿತು. ನನ್ನ ಈ ಮನೋಭಾವ ವನ್ನರಿತೋ ಏನೋ ಲೀಲು "ಏನು ಲಿಲ್ಲೀ ಏನು ಯೋಚಿಸುತ್ತಿರುವಿ?" ಎಂದಳು.

"ಏನಿಲ್ಲ. ನಿನ್ನೆ ರಾತ್ರಿ ಬಹಳ ಹೊತ್ತಿನವರೆಗೆ ಅ. ಈ. ವಿಷಯ ಮಾತನಾಡಿದೆವು. ಭೂತಗಳ ವಿಷಯವೂ ಬಂದಿತ್ತು. ಅವುಗಳ ವಿಷಯ ದಲ್ಲಿ ನನ್ನ ಅಭಿಪ್ರಾಯ ಕೇಳಿದಳು. ಏಕೇ ಕೇಳಿದಳೋ?" ಎಂದೆನು.

"ಅವಳಿಗೆ ದೆವ್ವ. ಭೂತ, ಪಿಶಾಚಿ ಇವುಗಳಲ್ಲಿ ವಿಶ್ವಾಸವೇ ಇಲ್ಲ. ಅದರ ಸಂಬಂಧವಾಗಿ ನಿನ್ನನ್ನು ಕೆಣಕಿ, ನೀನು ಹೇಳಿದ್ದನ್ನು ಆಧಾರ ವಾಗಿಟ್ಟುಕೊಂಡು ನಾಳಿನ ಡಿಬೇಟದಲ್ಲಿ ನಿನ್ನ ಮಾತುಗಳನ್ನೇ ನಿನ್ನ ಕೊರ ಳಿಗೆ ಕಟ್ಟುವ ಯುಕ್ತಿ ಮಾಡಿರಬೇಕು" ಎಂದು ಲೀಲು ನಕ್ಕಳು. ಅಷ್ಟರಲ್ಲಿ ಅವಳ ಗೆಳತಿಯೋರ್ವಳು ಅವಳನ್ನು ಕೂಗಿದ್ದರಿಂದ ಲೀಲು ಹೋಗಿ ಬಿಟ್ಟಳು. ನಾನು ಕೋಣೆಯ ಕಡೆಗೆ ಬಂದೆ.

ಸರೋಜ ಕುರ್ಚಿಯಲ್ಲಿ ಕುಸಿಬಿದ್ದು ಮೇಜಿನ ಮೇಲೆ ಒರಗಿದ್ದಳು. ಅವಳ ಉದ್ದವಾದ ಜಡೆಯು, ನೀಳವಾದ ಎಡತೋಳ ಮೇಲೆ ಹಾಯ್ದು ಇಳಿಬಿದ್ದಿತ್ತು. "ಸರೋಜ, ಸರೋಜ" ಎಂದು ನಾನು ಮೆಲ್ಲನೆ ಅವಳ ಬೆನ್ನನ್ನು ತಟ್ಟಿದೆ. ಸರೋಜ ಎದ್ದಳು. ಕಾಂತಿಹೀನವಾದ ಅವಳ ಕಣ್ಣುಗಳು ನನ್ನನ್ನು ನೋಡಿದವು. ದೀನಳಾಗಿ ಅವಳು ನನ್ನನ್ನು ಏನೋ ಬೇಡುವಂತೆ ಕಂಡಿತು. "ಅಸಾಧ್ಯ ತಲೆಶೂಲಿ, ಕಾಫಿ ಬೇಕು" ಎಂದಳು.

ಏನೂ ಮಾತಾಡದೇ ನಮ್ಮ ವಸತಿ ಗೃಹದ ಅಡಿಗೆಯ ಮನೆಗೆ ಹೋಗಿ ಅಡಿಗೆಯವಳಿಂದ ಕಾಫಿ ಮಾಡಿಸಿ ತಂದುಕೊಟ್ಟೆನು. ಸರೋಜಳು ಕುಡಿದಳು ಎದ್ದು ಕುಳಿತಳು. "ಕೊಂಚ ಹೊತ್ತು ಮಲಗು" ಎಂದು ಅವಳನ್ನು ಹಾಸಿಗೆಯಲ್ಲಿ ಮಲಗಿಸಿ ನಾನು ಪಟಾಂಗಣಕ್ಕೆ ಬಂದೆನು. ಅತ್ತಿಂದಿತ್ತ ಇತ್ತಿಂದತ್ತ ಓಡಾಡತೊಡಗಿದೆ. ತುಸು ಹೊತ್ತಿಗೆ ಸರೋಜಳೂ ಹೊರಗೆ ಬಂದಳು. ಏನೂ ಮಾತಾಡಲಿಲ್ಲ. ಗೋಡೆಗೆ ಇರಿಸಿದ ಕುರ್ಚಿಗಳಲ್ಲಿ ಇಬ್ಬರೂ ಕುಳಿತೆವು. ಬಹುಹೊತ್ತು ಇಬ್ಬರೂ ಮೌನವಾಗಿ ದ್ದೆವು. ಕಡೆಗೆ ಸರೋಜಳು,

"ಲಿಲ್ಲೀ! ನಿನ್ನೆ ರಾತ್ರಿ ಕೊಳಲೂದಿದವರಲ್ಲಾ ಅವರು ಅವರ ಸಂಗಡಿಗರು ಯಾರಿರಬಹುದು?"

ನಾನು ಇದೇ ಪ್ರಶ್ನೆಯನ್ನು ಸರೋಜಳಿಗೆ ಕೇಳಬೇಕೆಂದಿದ್ದೆ. ಅವರಾರೆಂದು ತಿಳಿಯುವ ಲವಲವಿಕೆ ನನಗೆ ಬಹಳವಾಗಿದ್ದಿತು. "ನಾನೂ ಇದನ್ನೇ ಕೇಳುವವಳಿದ್ದೆ"

"ನಾನು ಒಂದು ಸಣ್ಣ ಉಪಾಯವನ್ನು ಹೇಳುತ್ತೇನೆ ನಿನಗೆ ಸಮ್ಮತವೆ?"

"ಸಮ್ಮತವೇನು? ನಿನಗೆ ಬೇಕಾದದ್ದು ನನಗೂ ಬೇಕು"

ಸರೋಜಳು ನಕ್ಕಳು ನಿರಾಶೆಯ ನಗುನಕ್ಕಳು. "ಇವತ್ತು ರಾತ್ರಿ ಅವರು ಬಂದರೆ...ಒಂದು ವೇಳೆ ಬರದಿದ್ದರೆ?— ಬಂದೇ ಬರುವರು. ಗಾನದ ಚಟವು ಎಲ್ಲ ಚಟಕ್ಕಿಂತಲೂ ಬಲವಾದದ್ದೆಂದು ನಾನು ಕೇಳಿದ್ದೇನೆ— ಅಥವಾ ಬರಲಿಕ್ಕೂ ಇಲ್ಲ. ಬಂದಾದರೂ ಬರಲಿ ಆ ಮೇಲೆ ಹೇಳುವೆನು" ಅಸ್ಥಿರ ಚಿತ್ತಳಾಗಿ ಸರೋಜ ಎದ್ದು ಒಳಗೆ ಹೋಗಿಬಿಟ್ಟಳು.

x x x x

ರಾತ್ರಿ ಚಂದ್ರನ ಪ್ರತಿಬಿಂಬವು ಸಮುದ್ರದಲ್ಲಿ ಹೊಯ್ದಾಡುವ ಬೆಳ್ಳಿಯ ಚಂಡಿನಂತೆ ಕಾಣುತ್ತಿತ್ತು. ನಾನು ಸೃಷ್ಟಿಸೌಂದರ್ಯದ ಅವಲೋಕನೆಗಾಗಿ ಲಕ್ಷಿಸುತ್ತಿಲ್ಲ, ಗಾನದ ಲವಲವಿಕೆಯಿದ್ದಿತು. ಮೊದಲು

ಕೇಳಿದ ಅದೇ ದೇವಗಾನ ಗಾಳಿಯಲ್ಲಿ ತೇಲಿಬಂದು ನಮ್ಮ ಕಿವಿಯನ್ನು ಸೋಂಕಿತು. ಮನದ ತಂತಿಯನ್ನು ಮಿಡಿದಿತು. ಇಬ್ಬರ ಮುಖಗಳು ಕಮಲದಂತೆ ಅರಳಿದವು. "ಲಿಲ್ಲೀ" ಎಂದು ನನ್ನ ಭುಜದಮೇಲೆ ಕೈಯು ನ್ನಿಟ್ಟು "ಬಾಯನಾಕ್ಯುಲರ್‌ದಲ್ಲಿ ನೋಡೋಣವೇ " ಎಂದಳು ಸರೋಜ.

" ಬೆಳದಿಂಗಳಲ್ಲಿ ಏನು ಕಾಣುತ್ತಿದೆ ! " ನೋಡಬೇಕೆಂಬು ಲವಲವಿ ಕೆಯಿಂದ ಕೋಠಡಿಯೊಳಗೆ ಓಡಿದವಳೆ ಬಾಯನೊಕ್ಯುಲರ ತಂದು ನೋಡಿದೆ ಸರೋಜಳು ಕಸಿದುಕೊಂಡು ತಾನೂ ನೋಡಿದಳು. ಏನೋ ಇಬ್ಬರು ವ್ಯಕ್ತಿಗಳು ಕಂಡರೇ ಹೊರ್ತು, ಅವರ ಗುರ್ತು ಸಿಗಲಿಲ್ಲ. ಸಂಗೀತ ಕೆಲ ವೇಳೆ ನಡೆದು ನಿಂತು ಹೋಯಿತು. ಇಬ್ಬರೂ ಬಂದು ರಸ್ತೆಯ ಬಳಿ ನಿಂತ ಕಾರು ಹತ್ತಿ ನಡೆದರು. ಅಗ ಒಂದು ಯೋಚನೆ ಮಿಂಚಿನಂತೆ ಹೊಳೆಯಿತು. ಕಾರ ನಂಬರು ತೆಗೆದುಕೊಳ್ಳಬೇಕೆಂದು, ತೆಗೆದುಕೊಂಡದ್ದೂ ಆಯಿತು. ಬಾಯನಾಕ್ಯುಲರನ್ನು ಸರೋಜಳ ಉಡಿಯಲ್ಲಿ ಎಸೆದೆನು, ಅವಳ ಮುಖವು ಏನೋ ಒಂದು ವಿಧವಾಗಿತ್ತು, ಅಷ್ಟರಲ್ಲಿ ಸುಪರಿಂಟೆಂಡಳು ಅಲ್ಲಿಗೆ ಬಂದರು. ಅವಳನ್ನು ನೋಡಿ ನನ್ನ ಉತ್ಸಾಹ ತಗ್ಗಿತು. ಮುಖವು ಬಾಡಿತು.

ಸರೋಜ ಅವೇಗೆ ಮರ್ಯಾದೆ ಮಾಡಿ " ಅಮ್ಮಾ ಜ್ಯೋತಿಷ್ಯಶಾಸ್ತ್ರ ಕಲಿತು ಕೊಳ್ಳುವ ವಿಚಾರವಾಗಿ ನಿಮ್ಮನ್ನು ಕೇಬೇಕೆಂದಿದ್ದೆ ........" ಅವಳು ನಿಜವೆಂದೆಣಿಸಿ 'ಜೋರ್ತಿಮಂಡಲ' ಎಂಬ ಪುಸ್ತಕವನ್ನು ನೀನು ಅಭ್ಯಸಿಸಬಹುದು ವಿಧ್ಯಾರ್ಥಿಗಳಿಗಾಗಿಯೇ ನಾನು ಅದನ್ನು ಬರೆದಿದ್ದೇನೆ. ಇರಲಿ, ಇದರಲ್ಲಿ ನಿನಗೆ ಗತಿ ಇದೆಯಂದು ನನಗೆ ಇಂದಿಗೂ ತಿಳಿದಿರಲಿಲ್ಲವಲ್ಲ ?" ಸರೋಜಳು ತೃಪ್ತಿಯ ನಗೆ ನಕ್ಕಳು. " ಇದೆಲ್ಲಿಯ ಹುಚ್ಚು ಬಡೆಯಿತು ಇವಳಿಗೆ " ಎಂದು ನೆನೆಯುತ್ತ ಕೊಠಡಿಯಲ್ಲಿ ಹೋಗಿ ಹಾಸಿಗೆಯಲ್ಲಿ ಉರಳಿದೆ.

x x x x x x x

ಬೆಳದಿಂಗಳ ರಾತ್ರಿ ನಾನೂ ಸರೋಜಳೂ ಸಮುದ್ರತೀರಕ್ಕೆ ಗಾಳಿ ಸೇವನೆಗಾಗಿ ಕದ್ದು ಹೊರಟೆವು. ಅಕಸ್ಮಾತ್ತಾಗಿ ನಾನು ತೆಗೆದುಕೊಂಡಿದ್ದ

ನಂಬರಿನ ಕಾರು ಅಲ್ಲಿ ನಿಂತಿತ್ತು. ನಂಬರನ್ನು ಮತ್ತೊಮ್ಮೆ ನೋಡಿದೆ. ಸರೋಜಳ ಮುಖವನ್ನೂ ನೋಡಿದೆ, ಅವಳೂ ನನ್ನ ಮುಖ ನೋಡಿದಳು. ಇಬ್ಬರ ಹೃದಯಗಳು ಒಂದೇ ವಿಷಯಕ್ಕೆ ಮಾತಾಡಿದವು. ತುಸು ದೂರು ಹೋಗಿ ಮರೆಯಲ್ಲಿ ಕುಳಿತೆವು.

ಇಂಟರ ಮಿಜಿಯೇಟವರ್ಗದಲ್ಲಿ ಓದುತ್ತಿದ್ದ ರಾಧಾಬಾಯಿಯೆಂಬವಳು ಭುಜದ ಮೇಲೆ ತನ್ನ ಮಗುವನ್ನು ಮಲಗಿಸಿಕೊಂಡು ಸಾಗುತ್ತಿದವಳು ಆಕಸ್ಮಿತ್ತಾಗಿ ನಮ್ಮನ್ನು ಕಂಡು "ಯಾರು ಲಲಿತಾ, ತಾನೆ!" ಎಂದವಳೇ ನಮ್ಮ ಹತ್ತಿರವೇ ಬಂದು ಕುಳಿತು ಬಿಟ್ಟಳು. ಅವಳ ಸಂಗಡ ಬಂದಿದ ಅವಳ ತಮ್ಮ "ಅಕ್ಕಾ ಮುಕುಂದರಾಯರು ಬಂದಂತಿದೆ. ಅದೋ ಕಾರು?" ಎಂದು ತೋರಿದನು.

"ಮುಕುಂದರಾಯರೆಂದರೆ ಯಾರು ?" ಎಂದು ನಮ್ಮ ಮನದ ಲವಲವಿಕೆಯನ್ನು ಎಷ್ಟೂ ಹೊರತೋರದೆ ನಾನು ರಾಧಾಬಾಯಿಯನ್ನು ಕೇಳಿದೆ.

"ಓ........ಅವರು, ನಮಗೆ ದೂರದ ಸಂಬಂಧ ಭಾರೀಹಣವಂತರು"

"ಏನು ಕೆಲಸವೋ ?"

"ಶಿರಿವಂತರೂ ಹೊಟ್ಟೆಗಾಗಿ ದುಡಿಯಬೇಕೇನು!" ಎಂದು ರಾಧಾಬಾಯಿಯು ನಕ್ಕಳು. ಇದಕ್ಕೆ ಒಪ್ಪಿಗೆಯೆಂದು ಸರೋಜಳೂ ನಕ್ಕಳು.

ನಾನು ಮಾತು ನಿಲ್ಲಿಸಿದೆನು. ಸರೋಜಳು ಮಾತಾಡಲೇ ಇಲ್ಲ ಪರಪುರುಷರ ವಿಷಯವಾಗಿ ಹೆಚ್ಚು ಮಾತಾಡಿದರೆ ಮತ್ತೇನಾದರೂ ಅರ್ಥವಾದೀತಲ್ಲ. ಎಂಬ ಭೀತಿಯು ಮನದಲ್ಲಿತ್ತು. ರಾಧಾಬಾಯಿಗಿಂತ ಮುಂಚಿತವಾಗಿಯೇ ನಾವು ಹೊರಡಲನುವಾದೆವು. ಅವಳನ್ನು ಅವಳ ತಮ್ಮನ ಹತ್ತರ ಬಿಟ್ಟುಹೋಗುವ ಸೋಗನ್ನು ತೆಗೆದೆನು ಅಂದರೆ ಮುಕುಂದರಾಯರನ್ನು ಮತ್ತು ಅವರ ಇನ್ನೊಬ್ಬ ಗೆಳೆಯರನ್ನು ತೀರ ಸನಿಯದಲ್ಲಿ ನೋಡುವ ಭಾಗ್ಯವಾದರೂ ಲಭಿಸೀತೆಂದು ಆಶಿಸಿದೆನು. ಆ ರೀತಿ ಅವಳನ್ನು ಅಲ್ಲಿ ಬಿಡುವಾಗಲೇ ರಾಧಾಬಾಯಿಯು ಅವರಿಗೆ ನಮ್ಮ ಪರಿಚಯ ಹೇಳಿಬಿಟ್ಟಳು. ಅವರು ಎದ್ದರು. ನಮಗೆ ನಮಸ್ಕರಿಸಿದರು.

ಪ್ರತಿಯಾಗಿ ನಾವು ಅವರಿಗೆ ನಮಸ್ಕಾರ ಮಾಡಿದೆವು. ಕೊಳಲೂದುವವರು ತಂಪು ಕನ್ನಡಕವನ್ನು ಧರಿಸಿದ್ದರು. ಬಂಗಾಲಿಗಳು ಉಟ್ಟುಕೊಳ್ಳುವಂತೆ ಖಾಧೀ ದೋತರ ಉಟ್ಟಿದ್ದರು. ಮೊಳಕಾಲವರೆಗೆ ಬರುವ ಅಂಗಿ ತೊಟ್ಟಿದ್ದರು. ಹೆಗಲ ಮೇಲೊಂದು ಖಾದೀ ಶಾಲು ಇತ್ತು ಅವರು ಮುಂದೆ ನಡೆದರು. ನಾವು ಹಿಂಬಾಲಿಸಿದೆವು.

ಸರೋಜಳ ಆನಂದವನ್ನು ವರ್ಣಿಸಲು ನನಗೆ ಶಬ್ದಗಳು ಬಾರವು. ಅದಕೇ ನನಗಾದ ಆನಂದವನ್ನು ಹೇಳಲೇ,—ಛೇ, ಬಾಯಿ ಬರಲೊಲ್ಲದು. ಸರೋಜಳು ನನ್ನ ವಿಕಸಿತ ಮೋಗವನ್ನು ನೋಡಿದಳು. ಸುಖದ ಕಣ್ಣಲ್ಲಿ ತನ್ನ ದೃಷ್ಟಿ ಇಟ್ಟಳು. ಚೇಷ್ಟೆಗೆ ಪ್ರಾರಂಭಿಸಿದಳು. ನನ್ನ ಕೈಯನ್ನು ಚಿವುಟಿದಳು ಕಾಲುಬೆರಳನ್ನು ತುಳಿದಳು. ನನ್ನ ಮನದ ಒಯಿಕೆ ನನ್ನ ಗೆಳತಿಗೆ ತಿಳಿಯಿತಲ್ಲ! ಎಂದು ನಾಚಿದೆ. ಏಕೋ ತುಸು ಭಯವೂ ಆಯಿತು.

X X X X

ರಾತ್ರಿ, ಮಲಗುವ ಹೊತ್ತಾಯಿತೆಂದು ಸೂಚಿಸುವ ವಸತಿ ಗ್ರಹದ ಒಂಬತ್ತರ ಗಂಟೆ ಬಾರಿಸಿತು. ಮಾಸಪತ್ರಿಕೆಯ ಪಾನುಗಳನ್ನು ತಿರುವುತ್ತ ನಾನು ಕುರ್ಚಿಯಲ್ಲಿ ಹಾಗೆಯೇ ಕುಳಿತಿದ್ದೆ. ಸರೋಜಳು ನನ್ನ ಹಿಂದೆ ನಿಂತಿದ್ದಳು. ನನ್ನ ಆಗಿನ ಮನದ ಅಸ್ಥಿರತೆಯನ್ನು ಕಂಡೋ ಏನೋ ನಕ್ಕುಬಿಟ್ಟಳು. “ ಲಿಲ್ಲೀ, ನಿನ್ನ ಮನದಲ್ಲಿ ಏನು ನಡೆದಿದೆ ? ಗೀತಾಮೃತ ಉಂಟೋ ಇಲ್ಲವೋ ? ”

“ ನನಗೇನು ಗೊತ್ತು ಉಂಟಾದರೆ ಉಂಟು, ಇಲ್ಲದಿದ್ದರೆ ಇಲ್ಲ ”

“ ಆಹಾ, ಏನು ಜ್ಯೋತಿಷ್ಯ, ಏನು ಭವಿಷ್ಯದ ಜ್ಞಾನ ”

“ ನಿಜ. ನಿನಗೆ ತಿಳಿದಷ್ಟು ಜ್ಯೋತಿಷ್ಯ ನನಗೆ ಹೇಗೆ ತಿಳಿಯಬೇಕು ”

ಸರೋಜಳು ನನ್ನ ಕಿವಿಯ ಹತ್ತರ ಬಗ್ಗಿ ನುಡಿದಳು “ ಮೊಗದಲ್ಲಿಯ ನಗೆ ಏನು ! ನಡತೆಯಲ್ಲಿಯ ನಯವೇನು ! ಅವರನ್ನು ಗಮನಿಸಿದೆಯಾ ? ”

ನನಗೆ ಆಶ್ಚರ್ಯ! ಪರಮಾಶ್ಚರ್ಯ ನನ್ನ ಮನವು ಈಗ ಏನು ಎಣಿಕೆ ಹಾಕುತ್ತಿತ್ತೋ, ಅದನ್ನೇ ಇವಳು ನುಡಿದುಬಿಟ್ಟಳಲ್ಲಾ. ನಿಜವಾಗಿಯೂ ಇವಳು ಜ್ಯೋತಿಷ್ಯ ಶಾಸ್ತ್ರ ಓದಿಕೊಂಡಿರುವಳೇ?

" ಹೌದು—ಆದರೆ—ಅಲ್ಲಾ— ತಂವು ಕನ್ನಡಕವನ್ನು ಏಕೆ ಧರಿಸಿರುವರು ? "ಎಂದೆನು.

" ಅವರ ಕಣ್ಣುಗಳನ್ನು ನಾವು ನೋಡಬಾರದೆಂದು "

ಇದ್ದರೂ ಇದ್ದೀತು. ಅವರ ಕಣ್ಣಿಂದ ಹೊರಟ ತೇಜಃಪುಂಜವಾದ ನೋಟವನ್ನು ನಮ್ಮಿಂದೆದುರಿಸುವಾಗದೆಂಬ ಉದ್ದೇಶದಿಂದಲೇ ತಂಪು ಕಣ್ಣಡಕ ಧರಿಸಿರಬಹುದು. ಎಂಥ ದೊಡ್ಡ ಮನಸ್ಸಿದು ! ಮಹಾ ಪೂಜ್ಯವ್ಯಕ್ತಿ ಎಂದೆಂದುಕೊಂಡಳು. ಅವಳ ಮನದ ಭಾವವನ್ನು ಸರೋಜಳು ಅರಿತಳೋ ಏನೋ.

" ಲಿಲ್ಲೀ, ನೀನು ಇದುವರೆಗೂ ನನ್ನಿಂದ ಒಂದು ಮಾತನ್ನು ಮುಚ್ಚಿಟ್ಟುಕೊಂಡವಳಲ್ಲ. ಈಗ ಹೀಗೇಕೆ ? ನಿನ್ನ ಕೂಡ ನಾನು ಜಗಳಾಡುವೆನೆಂದು ಅಂಜುವಿಯಾ ? " ಎಂದಂದು ನನ್ನನ್ನು ಒಂದು ಮಗುವೆಂದು ತಿಳಿದು ಅಪ್ಪಿದಳು.

ತನ್ನ ಮನಸ್ಸು ಅವರನ್ನು ಹಿಂಬಾಲಿಸಿತೆಂದೂ, ಅವರು ತನ್ನ ಹೃದಯದಲ್ಲಿ ದೇವರಾಗಿ ಇದ್ದುಬಿಟ್ಟರೆಂದೂ ಸರೋಜಳಿಗೆ ಸ್ಪಷ್ಟವಾಗಿ ತಿಳಿದುಬಿಟ್ಟಿತೆಂದು ಲಲಿತೆಗೆ ಆನಂದವಾಯಿತು. ಮರುಕ್ಷಣದಲ್ಲಿ ಹಾಗೆ ಸರೋಜಳಿಗೆ ತಿಳಿದದ್ದು ಪ್ರಮಾದವಾಯಿತೆಂದು ಅಂಜಿಯೂ ಬಿಟ್ಟಳು. ಸರೋಜಳ ಮಾತಿಗೆ ಪ್ರತಿಯಾಗಿ ಏನು ಅನ್ನಬೇಕೆನ್ನುವದು ತಿಳಿಯದೇ ಪೇಚಾಡತೊಡಗಿದಳು. ಮೆಲ್ಲಗೆ ಗಾಳಿ ಬೀಸಿತು. ಮನಕ್ಕೆ ಸುಖ ಕೊಟ್ಟಿತು.

' ಅಗೋ ಕೊಳಗಿನ ಗಾನ ಕೇಳುವದು— "

" ಲಿಲ್ಲೀ—ಲಲಿತೆಯು ಮಾತಿಗೆ ಉತ್ತರವೆಂಬಂತೆ ಲಿಲ್ಲೀ—— "

ಮುಂದೆ ಸರೋಜಳ ಮನಸ್ಸು ಗಾನದಲ್ಲಿ ಲೀನವಾಯಿತೋ, ಅಥವಾ

ಕೊಳಲೂದುವವರ ಸನ್ನಿಧಾನಕ್ಕೆ ಓಡಿ ಹೋಯಿತೋ, ಮಾತು ಅಲ್ಲಿಗೇ ನಿಂತಿತು.

X X X X

ಮರುದಿನ ರಾಧಾಬಾಯಿಯ ಪುಣ್ಯದಿಂದ, ಮುಕುಂದರಾಯರೂ ರಾಧಾಬಾಯಿಯೂ ನಮ್ಮ ಕೋಣೆಗೆ ಉಪಹಾರಕ್ಕೆಂದು ಬಂದರು. ರಾಯರು ಭಾರಿ ಆಳು. ಒಳ್ಳೇ ಜ್ಞಾನಿಗಳೆಂದು ಅವರ ಮುಖಲಕ್ಷಣವೇ ಹೇಳುತ್ತಿತ್ತು. ಅನೇಕ ಮಾತುಗಳನ್ನಾಡಿದೆವು. ರಾಯರು ಹೊರಡುವಾಗ ಸರೋಜಳು "ಆಗಾಗ ಬರುತ್ತಿರಬೇಕು" ಎಂದು ಬಿನ್ನವಿಸಿಕೊಂಡಳು. "ಆಗಲಿ" ಎಂದು ಅವರು ಹೊರಟು ಹೋದರು. ನಾವು ಪದ್ಧತಿಯಂತೆ ಓದಲು ಕುಳಿತೆವು. ಓದಿನಲ್ಲಿ ಮನಸ್ಸು ಇದ್ದರೆ ತಾನೆ, ಸುಮಾರು ಹದಿನೈದು ನಿಮಿಷಗಳವರೆಗೆ ಪಾನುಗಳನ್ನು ತಿರುವಿ ಹಾಕುತ್ತಿದ್ದಿರಬಹುದು. 'ಲಿಲ್ಲೀ' ಎಂಬ ಶಬ್ದವನ್ನು ಕೇಳಿ ನಿದ್ರೆಯಿಂದ ಎಚ್ಚತ್ತವಳಂತೆ ಗಾಬರಿಯಾದೆ "ಏಕೆ ಕಳ್ಳಿಯಂತೆ ಹೀಗೇಕೆ ಗಾಬರಿಯಾಗುವಿ?" ಎಂದು ಸರೋಜಳು ಕೆಣಕುವ ನಗೆನಗುತ್ತ ನನ್ನ ಕುರ್ಚಿಯ ಕೈ ಮೇಲೆ ಕುಳಿತುಕೊಂಡು "ತಿಳಿಯಿತೇ?" ಎಂದಳು.

ತನ್ನ ಮನಸ್ಸಿನಲ್ಲಿದ್ದುದು ಸರೋಜಳಿಗೆ ತಿಳಿಯಿತೇನೋ ಎಂಬ ಗಾಬರಿಯಿಂದ ಲಲಿತಳ ಮುಖವು ಕೆಂಪಾಯಿತು. "ಅಂ ಉಂ" ಎನ್ನ ತೊಡಗಿದಳು,

"ಲಿಲ್ಲೀ, ಒಂದು ವಿಷಯವನ್ನು ನೀನು ಗಮನಿಸಲೇ ಇಲ್ಲವೆನ್ನುವಂತೆ ತೋರುವದು"

"ಯಾವುದು?"

"ಅವರು— ಮುಕುಂದರಾಯರು—ಕುರಡರು— "

"ಹಾಂ" ಲಲಿತೆಗೆ ಬಹಳ ಆಶ್ಚರ್ಯವಾಯಿತು. ಮನದಲ್ಲಿ ಏಕೋ ವೇದನೆಯೂ ಆಯಿತು. "ಹಾಂ— ಅದು ನಿಜವೇ?——ಆದರೆ—" ಲಲಿತೆಯು ಗಂಟಲವನ್ನು ಸರಿಮಾಡಿಕೊಂಡಳು ಬರುತ್ತಿರುವ ದುಃಖವನ್ನು ಪ್ರಯಾಸದಿಂದ ನುಂಗಿಕೊಂಡಳು. "ಆದರೆ ಚಹ ಕುಡಿಯುವಾಗ,

ಒಬ್ಬೊಬ್ಬರು ಮಾತಾಡುವಾಗ ಅವರವರ ಕಡೆಗೆ ಹೊರಳಿ ನೋಡುವದೂ, ಅವರ ಮುಖದಲ್ಲಿಯ ತೇಜಸ್ಸೂ—- " ಲಲಿತೆಯು ಮತ್ತೆ ಗಂಟಲನ್ನು ಸರಿಮಾಡಿಕೊಳ್ಳುವ ಪ್ರಯತ್ನದಲ್ಲಿ ತೊಡಗಿದಳು.

"ಲಿಲ್ಲೀ, ದೇಹದ ಒಂದು ಅಂಗ ಊನವಾದರೆ ಅದರ ಶಕ್ತಿ ಉಳಿದವುಗಳಲ್ಲಿ ಬಂದು ಹೆಚ್ಚುತ್ತದೆ ಎಂಬುದನ್ನು ನೀನು ಕೇಳಿಲ್ಲವೇ — !"

ನಾನು ಏನೂ ಮಾತಾಡದೇ ಬೆಪ್ಪಳಂತೆ ಕುಳಿತುಬಿಟ್ಟೆ. ಎದೆ ಧಬಧಬ ಎಂದು ಹೊಡೆದುಕೊಳ್ಳಹತ್ತಿತು. ಒಮ್ಮೆ ಅವಳನ್ನು ನೋಡಿದೆ. ಒಮ್ಮೆ ನೆಲ ನೋಡಿದೆ. ಮತ್ತೊಮ್ಮೆ ಶೂನ್ಯ ಜಗತ್ತಿನಲ್ಲಿ ಏನೋ ಹುಡುಕುವವಳಂತೆ ನೋಡಿದೆ. ಸರೋಜಳು ಕುಳಿತಲ್ಲಿಯೇ ನನ್ನನ್ನು ಒಂದು ತೋಳಿನಿಂದ ತನ್ನ ಎದೆಗೆ ಎಳೆದುಕೊಂಡಳು. ಮತ್ತೊಂದು ಕೈಯಿಂದ ನನ್ನ ಗಲ್ಲಗಳನ್ನು ಹಿಡಿದು ತನ್ನೆಡೆಗೆ ಮೊಗ ತಿರುವಿಸಿ, ಲಿಲ್ಲೀ, ಅವರು ನಿನ್ನನ್ನು ಪ್ರೀತಿಸುತ್ತಾರೆ ನನಗೆ ಗೊತ್ತಾಯಿತು.—"

ಎಂಥ ಸಿಡುಲಿನಂಥ ಹೊಡೆತವಿದು ! ಲಲಿತೆಯ ಎದೆಯ ಹಾರುವಿಕೆಯು ನಿಂತೇ ಹೋಯಿತೇನೊ, ಇದು ಸರೋಜಳಿಗೆ ಹೇಗೆ ಗೊತ್ತಾಯಿತು! ಮನದ ಬಯಕೆಯು ಗುಟ್ಟು ರಟ್ಟಾಯಿತು. ಲಲಿತೆಯ ಕಣ್ಣುಗಳಿಂದ ಪಳಪಳನೇ ನೀರುಗಳುದುರಿದವು. ಮುಖ ಮುಚ್ಚಿಕೊಂಡು ಮೇಜಿನ ಮೇಲೆ ಬಿದ್ದು ಅಳತೊಡಗಿದಳು. ಸರೋಜಳ ಕಣ್ಣುಗಳಲ್ಲಿಯೂ ನೀರು ಬಂದವು. ಅವಳ ಮನಸ್ಸು ನೊಂದಿತು. ಮೊಗವು ಕಪ್ಪಿಟ್ಟಿತು, ಸ್ವರವು ಕುಗ್ಗಿತು, ಲಲಿತೆಯ ಬೆನ್ನ ಮೇಲೆ ಕೈಯಾಡಿಸುತ್ತ "ಅವರು ಕುಳಿತಾಗ ನೀನು ಬರುವ, ಆಡುವ ಶಬ್ದವನ್ನೂ ಅವರು ಆಲಿಸುತ್ತಿದ್ದರು. ನಿನ್ನ ಧ್ವನಿ ಕೇಳಿ ಅವರಿಗಾವ ಸಂತೋಷ ಅವರ ಮೊಗದಲ್ಲಿ ಒಡೆದು ಸ್ಪಷ್ಟವಾಗಿ ಕಾಣುತ್ತಿತ್ತು. ಅವರ ಗೀತವನ್ನು ನಾವು ದೇವಗಾನವೆಂದು ಹೇಳುತ್ತೇವೆ. ಆದರೆ ಅವರು ನಿನ್ನ ಧ್ವನಿಯು ಅದಕ್ಕಿಂತಲೂ ಮಧುರವೆಂದು ಭಾವಿಸಿದ್ದಾರೆ"

" ನಿಜವೇ ಸರೋಜಾ? " ಲಲಿತೆಯು ಬಹಳ ಉತ್ಸಾಹದಿಂದ ಚಿಗರಿಯಂತೆ ಜಿಗಿದು ಖುರ್ಚಿಯಿಂದೆದ್ದು ನಿಂತು, ಸರೋಜಳ ಎರಡೂ ರಟ್ಟೆಗಳನ್ನು ಹಿಡಿದು, ಅವಳ ದೃಷ್ಟಿಯಲ್ಲಿ ತನ್ನ ದೃಷ್ಟಿಯನ್ನಿಟ್ಟು " ನನ್ನ ಸರೋಜಾ ಇದು ನಿಜವೇ — ನಿನಗೆ ಇದು ಹೇಗೆ ತಿಳಿಯಿತು ? ಎಂದಳು.

"ನನಗೆ ಹೇಗೋ ತಿಳಿಯಿತು !" ಸರೋಜಳ ಮೊಗವು ಇನ್ನೂ ಸಣ್ಣಾಯಿತು. ದೃಷ್ಟಿಯನ್ನು ಕೆಳಗೆ ಚಲ್ಲಿದಳು. "ಸರೋಜ, ನನ್ನಿಂದ ಒಂದೂ ಮುಚ್ಚಿಡದಿದ್ದವಳು ಇದನ್ನೇಕೆ ಮುಚ್ಚಿಡುವಿ ? ಹೇಳು; ಬೇಗ ಹೇಳು."

ಸರೋಜ ಹೇಳಲು ಸಿದ್ಧಳಾದಳು. ಈಗ ಇವಳು ದುಃಖವನ್ನು ಹತ್ತಿಕ್ಕೆ ಗಂಟಲು ಸರಿಮಾಡಿಕೊಂಡಳು. "ನಾನು ನಿನಗಿಂತಲೂ ಎಷ್ಟೋ ಹೆಚ್ಚು, ಎಷ್ಟೋ ಪಟ್ಟು ಹೆಚ್ಚು, ಅವರನ್ನು-ಅವರನ್ನು ಪ್ರೀತಿಸುತ್ತೇನೆ-" ಸರೋಜಳು ಲಲಿತೆಯ ಹಿಡಿತವನ್ನು ಬಿಡಿಸಿಕೊಂಡು ಓಡಿಹೋಗಿ ಹಾಸಿಗೆಯಲ್ಲಿ ಬಿದ್ದು ಅಳತೊಡಗಿದಳು.

"ಸರೋಜಾ" ಲಲಿತೆ ಗಾಬರಿಯಾದಳು; ದಿಗ್ಮೂಢಳಾದಳು. ತಲೆ ಗಿಮಿಗಿಮಿ ತಿರುಗಿತು. ದೀಪಗಳು ಜೋಲಿ ಹೊಡೆದವು; ಆಕಾಶವು ಬುಡಮೇಲಾಯಿತು, ಬಿರುಗಾಳಿ ಬೀಸಿತು, ಗುಡುಗು, ಸಿಡ್ಲು, ಮಳೆ, ಭಯಂಕರ ಮಳೆ.

§ § § §

ಕಾಲವನ್ನು ನೂಕುತ್ತಿದ್ದೆವು ದಿನಗಳನ್ನು ದಬ್ಬುತ್ತಿದ್ದೆವು. ನಮ್ಮ ಕಠೋಡಿಯಲ್ಲಿ ಆಸಲ್ಯ, ನಿರುತ್ಸಾಹಗಳು ಮೂರ್ತಿಮಂತರಾಗಿ ತಾಂಡವವಾಡುತ್ತಿದ್ದವು. ಆದರೆ ಉಳಿದ ವಿದ್ಯಾರ್ಥಿನಿಯರಿಗೇನು ಇದರ ಅರಿವು? ಅವರು ಓಡುವರು, ಆಡುವರು, ಜಿಗದಾಡುವರು, ಹರಟೆಕೊಚ್ಚುವರು, ಈದಿನವಾದರೂ ಹಿಗೇಯೇ. ಮಲಗಲು ಸೂಚಿಸಲು ಒಂಬತ್ತರ ಗಂಟೆಯಾಯಿತು. ದೀಪವನ್ನಾರಿಸಿಮಗಲಿದೆ. ಸರೋಜಳೂ ಮಲಗಿದಳು. ದೇಹ ಹಾಸಿಗೆಯ ಮೇಲಿತ್ತು. ಮನಸ್ಸು? .... ಮುಕುಂದರಾಯರಿಗೆ ಮದುವೆಯಾಗಿರಬಹುದು, ಆಗಿರಲಿಕ್ಕೂ ಇಲ್ಲ. ಹೆಂಡತಿ ಗುಣವಂತಿ, ರೂಪವಂತಿ ಇರುವಳು; ಅವರಿಗೊಂದು ಮಗು ಇರಬೇಕು. ಅವರು ಈಗ ಮಗುವನ್ನು ತೊಟ್ಟಿಲಲ್ಲಿಟ್ಟು ತೂಗುತ್ತಿರಬಹುದು..... ಎಂಥ ಕಲ್ಪನೆಯಿದು ಎಂದಂದುಕೊಂಡಳು ಲಲಿತಾ ನಕ್ಕುಬಿಟ್ಟಳು.

"ಏಕೆ ನಗುವಿ ?" ಸರೋಜಳಿಗೆ ನಿದ್ರೆ ಹತ್ತಿರಲಿಲ್ಲ.

ಕಣ್ಣು ತೆರೆದು ನೋಡಿದೆ ಕತ್ತಲಲ್ಲಿ ಮೇಜಿನ ಬಳಿ ನಿಂತಂತೆ ಕರಿ ಮೂರ್ತಿಯನ್ನು ಕಂಡೆ. ಗುಂಡಿಯನ್ನು ಒತ್ತಿ ದೀಪಹಚ್ಚಿ ನೋಡುತ್ತೇನೆ. ಸರೋಜಾ ಚಿಕ್ಕ ಗ್ಲಾಸಿನಲ್ಲಿ ಏನನ್ನೋ ಕರಗಿಸುತ್ತಿದ್ದಳು. ನಾನು ಗಾಬರಿಯಾದೆ. ನನ್ನ ಜ್ಞಾಪಕಕ್ಕೆ ಏಕೆ ಬೇಗ ಹೊಳೆಯಿತೋ ಹೇಳಲಾರೆ, ಸಾಯಿನ್ಸ ಲೊಬೊರೇಟರಿಯಿಂದ ಪೊಟೆಸೆಯಂ ಸಾಯನೇಟನ್ನು ಸರೋಜಳು ಕದ್ದು ತಂದದ್ದು ನೆನಪಾಯಿತು. "ಅಯ್ಯೋ ಕೆಟ್ಟೆ, ಎಂದು ಅವಳ ಕೈಯಲ್ಲಿಯ ಗ್ಲಾಸನ್ನು ಕಸಿದುಕೊಳ್ಳುವದರಲ್ಲಿ ಅದನ್ನು ಕುಡಿದೇಬಿಟ್ಟಳು.

ಗಂಟೆಬಾರಿಸಿದೆ, ಪ್ರೊಫೇಸರರಿಗೂ ಡಾಕ್ಟರರಿಗೂ ಫೋನಮಾಡಿದೆ. ಏಕೋ ಏನೋ ರಾಧಾಬಾಯಿಯನ್ನೂ ಕರಿಸಿ ಮುಕುಂದರಾಯರನ್ನು ಕರಿಸುವವ್ಯವಸ್ಥೆ ಮಾಡಿದೆ. ಕ್ಷಣದಲ್ಲಿ ಎಲ್ಲರೂ ಕಲೆತರು.

ಜ್ಞಾನವಿಲ್ಲದೆ ಬಿದ್ದಿದ್ದಳು ಸರೋಜ. ಡಾಕ್ಟರರು ಹೇಳಿದರು. ಪ್ರಾಣದ ಭಯವಿಲ್ಲೆಂದು. ಅಂದೇ ಮಧ್ಯಾನ್ಹ ಸರೋಜಳ ತಂದೆ ತಾಯಿಗಳು ಬಂದರು. ಅವಳ ತಲೆಗೆಂಬಿಗೆ ಕುಳಿತು ಶುಶ್ರೂಷೆಯಲ್ಲಿ ತತ್ಪರರಾದರು ನರ್ಸಳೂ ಇದ್ದಳು. ನಾನು ಮೂಕಳಾದೆ. ಏನು ಮಾತಾಡುವದೆಂಬದು ತಿಳಿಯದೇ ಅತ್ತಿಂದಿತ್ತ ಇತ್ತಿಂದತ್ತ ಸುಮ್ಮನೆ ಅಲೆದಾಡುತ್ತಿದ್ದೆ.

ಮುಕುಂದರಾಯರೂ ಅವರ ಸ್ನೇಹಿತರೂ ರಾಧಾಬಾಯಿಯವರೂ ಬಂದರು. ಅವರೆಲ್ಲರೂ ಬಹಳ ನೊಂದುಕೊಂಡಂತೆ ಕಂಡರು. ಮೆಲ್ಲಗೆ ಹೆಜ್ಜೆಯಮೇಲೆ ಹೆಜ್ಜೆಯನ್ನಿಟ್ಟು ಸರೋಜಳ ಹತ್ತರ ಧಾವಿಸಿದರು. ಯಾರೂ ಮಾತಾಡಲಿಲ್ಲ, ಎಲ್ಲಿಯೂ ನಿಶಬ್ದ. ಸಮುದ್ರದ ತೆರೆಗಳ ಹೊಡೆತದ ಗಂಭೀರ ಗದ್ದಲವು ಈ ಶಾಂತತೆಗೆ ಹಿನ್ನಲೆಯಂತಿತ್ತು. ಸರೋಜಳ ತಂದೆಯು ಲಲಿತೆಗೆ ಕೇಳಿದರು. "ಮಗೂ ಇವರ ಪರಿಚಯ .... " ಲಲಿತೆಯು ಪರಿಚಯಮಾಡಿಕೊಡುವ ಪೂರ್ವದಲ್ಲಿಯೇ ಅವರೇ ಮುಂದರಿಸಿದರು. "ಭವಾನಿ ಜ್ಞಾನ ಸಾಗರ ರಾಗಿನ ಕುಮಾರ ಮುಕುಂದ ನಾನು" ಎಂದರು.

"ಆಂ, ಮುಕುಂದನೇ ನನ್ನ ಅಳಿಯ ಮುಕುಂದನೇ, ಎಷ್ಟು ವರುಷಗಳಾಗಿ ಹೋದವು. ಹತ್ತುವರುಷ ಮಾಯವಾಗಿ ಬಿಟ್ಟಿದ್ದಿರಲ್ಲಾ... ..."

ಎನ್ನುವಾಗಲೇ ಮುಕುಂದರಾಯರು ಎದ್ದು ಮುದುಕನಿಗೆ ನಮಸ್ಕರಿಸಿದರು. ಮುದುಕನು ಅಳಿಯನನ್ನು ಅಪ್ಪಿಕೊಂಡನು. ಆಗ ಸರೋಜಳು ಮೆಲ್ಲನೆ ಕಣ್ಣು ತೆರೆದಳು, ನೋಡಿದಳು. ತನ್ನ ತಂದೆ ಮತ್ತು ತನ್ನ ... ಇಬ್ಬರ ಮಿಲನ. ಸಂತೋಷವಾಯಿತು. ಬಹಳ ಸಂತೋಷವಾಯಿತು. ತುಟಿಯಲ್ಲಿ ನಗು, ಕಣ್ಣಲ್ಲಿ ನೀರು. ಎರಡೂ ಕೈಗಳನ್ನು ಮುಂದೆ ಮಾಡಿದಳು. ಲಲಿತಾ ಓಡಿಬಂದು ಸರೋಜಳನ್ನು ಅಪ್ಪಿದಳು. ದುಃಖವು ಒತ್ತರಿಸಿ ಬಂದಿತು, ಅತ್ತಳು. ಸರೋಜಳೂ ಅತ್ತಳು. "ಲಿಲ್ಲಿ.... "

"ಸರೋಜ ಕ್ಷಮಿಸು... ನಾನು ಪಾಪಿ "

"ಅಲ್ಲ. ಅಲ್ಲ ನನ್ನ ಮನದಲ್ಲಿ ಯಾವುದನ್ನು ಮುಚ್ಚಿಡದೆ ಇದ ನ್ನೊಂದೇ ನಿನ್ನಿಂದ ಮುಚ್ಚಿಟ್ಟಿದ್ದೆನು ಅದುದರಿಂದ ನಾನು ಪಾಪಿ..........."

"ಅಲ್ಲ" ಮುಕುಂದರಾಯರು ಮುಂದೆ ಬಂದರು. "ನನ್ನ ಮಡದಿ ಯನ್ನು ದೂರಸರಿಸಿ ಇಷ್ಟು ದಿನ ಅಜ್ಞಾತದಲ್ಲಿದ್ದವನು ನಾನು ಪಾಪಿ. ಅಕಸ್ಮಾತ್ತಾಗಿ ಅಂದು ಮಿಂಚಿನ ಹೊಡತಕ್ಕೆ ನನ್ನ ದೃಷ್ಟಿ ಸಿಕ್ಕು, ಹೋಗಿ ಬಿಟ್ಟದ್ದರಿಂದ "ಕುರುಡನನ್ನು ಕಟ್ಟಿಕೊಂಡು ನನ್ನ ಮಡದಿ ಸುಖಪಡುವಳೇ ನಾನು ದುಃಖಿ ನನ್ನ ಸಹವಾಸದಿಂದ ಅವಳೂ ದುಃಖ ಪಡುವಳು ಎಂದು ಓಡಿ ಹೋದೆ. ಆದರೆ ಈಗ ಕಂಡದ್ದೇನು. "ಇವಳು ನನ್ನ ಮಡದಿಯಲ್ಲ, ನನ್ನ ದೇವತೆ, ಗೃಹಲಕ್ಷ್ಮಿ. ಪ್ರೀತಿಯ ಆದರ್ಶ ಮೂರ್ತಿ. ಪತಿಯು ಯಾವ ಸ್ಥಿತಿಯಲ್ಲಿದ್ದರೂ ಅವನನ್ನು ಸ್ಥಿರವಾಗಿ ಹೃದಯದಲ್ಲಿಟ್ಟುಕೊಂಡ ಮಹಾ ಪತಿವ್ರತೆ........ ಆದ್ದರಿಂದ ನೀವಿಬ್ಬರೂ ಯಾವಾಗಲೂ ಪವಿತ್ರರು. ನಾನು ಪಾಪಿ."

ಮುಕುಂದರಾಯರು ಸಾವರಿಸುತ್ತ ಮಂಚದ ಸನಿಯಕ್ಕೆ ಬಂದರು, ಸರೋಜಳ ಮೈ ಮೇಲೆ ಕೈಯಾಡಿಸಿದರು. ಅವಳ ಸಪುಳಾದ ಮನೋಹರ ವಾದ, ದುಂಡಗಿನ ತೋಳ ಮೇಲೆ ಮೆಲ್ಲಗೆ ಅವರ ಬೆರಳುಗಳು ಓಡಾಡಿದವು. ಮುಕುಂದರಾಯನ ಸ್ನೇಹಿತರು ಎದ್ದು ಹೊರಗೆ ಹೊರಟರು, ಲಲಿತಾ ಸಾಗಿ ದರು ಸರೋಜಳ ತಂದೆ ಹಿಂಬಾಲಿಸಿದರು. ಸರೋಜಳ ತಾಯಿ ಏನೋ ತರುವದಕ್ಕೆಂದು ಹೊರಗೆ ಬಂದರು. ನರ್ಸ ಓಡಿದಳು.

ಸರೋಜಳು ಇವರ ನಾಟಕ ನೋಡಿ ನಕ್ಕಳು. ಮುಕುಂದರಾಯನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ತಲೆಯಮೇಲಿಟ್ಟುಕೊಂಡಳು. ಮುಕುಂದರಾಯನ ಕೈ ಹಾಗೆ ಮುಖದ ಮೇಲೆಲ್ಲ ಓಡಾಡಿತು. ಅವಳ ಕಣ್ಣಿನಲ್ಲಿ ನೀರು. ಮುಕುಂದರಾಯನ ಕಣ್ಣಲ್ಲಿಯೂ ನೀರು ಬಂದವು. ಇಬ್ಬರ ಕಣ್ಣಗಳಲ್ಲಿಯ ನೀರು ಒಂದಾಗಿ ಕೋಡಿ ಹರಿದಂತೆ ಹರಿದುಹೋದವು.

---

## " ಗೋಪಾಲ ಬಾ "

ಅಸ್ತಮಿಸುವ ಸೂರ್ಯನ ಕಿರಣಗಳಿಂದ ಬಿದ್ದ ಗಿಡಗಳ ನೆರಳು ಬಹಳ ಬಹಳ ಉದ್ದಕ್ಕೆ ಸಾಲಾಗಿ ಬಿದ್ದಿದ್ದವು. ಪಕ್ಷಿಗಳು ತಮ್ಮ ಗೂಡು ಗಳನ್ನು ಹುಡುಕಿಕೊಂಡು ಹೊರಟಿದ್ದವು. ಚಿಕ್ಕ ಗೋಪಾಲನು ತನ್ನ ಗೆಳೆಯ ಕಸ್ತೂರಿಯ ಸಂಗಡ ಆಡಿ ಮನೆಗೆ ಧಾವಿಸಿದ್ದನು. ಬೀದಿಯನ್ನು ಸರಿಪಡಿಸಲು " ಖಡಿ " ಗಳ ರಾಸಿರಾಸಿಗಳನ್ನು ಅದರ ಎಡಬಲಕ್ಕೂ ಹಾಕಿದ್ದರು. ಅದರಲ್ಲಿಯ ಒಂದೆರಡು ಕಲ್ಲುಗಳನ್ನು ಆರಿಸಿಕೊಂಡು ಕಿಸೆಯಲ್ಲಿ ಇಟ್ಟನು. ಕಸ್ತೂರಿಯೂ ಕೆಲವು ಸಣ್ಣ ಕಲ್ಲುಗಳನ್ನು ತೆಗೆದು ಕೊಂಡನು. ಇಬ್ಬರು ಮಾತಾಡುತ್ತ ನಡೆದರು. ದಾರಿಯಲ್ಲಿ ತಾವು ಕಲಿ ಯುತ್ತಿದ್ದ ಪಾಠಶಾಲೆ ಹತ್ತಿತು. ಅದರ ಕಡೆಗೆ ಇಬ್ಬರ ದೃಷ್ಟಿಯೂ ಹರಿ ಯಿತು. ಅದರ ಕಂಪೌಂಡ ಗೋಡೆಯ ಮೇಲೆ ಏನೋ ಬರೆದದ್ದು ಕಂಡಿತು. ಆಶ್ಚರ್ಯ, ಬಹಳ ಆಶ್ಚರ್ಯ. " ಗೋಪಾಲ ಬಾ " ಎಂದು ಬರೆದಿದೆ.

ಗೋಪಾಲನಿಗೆ ಇದು ನಿಜವೋ, ಕನಸೋ ಎಂದೆನಿಸಿತು. ಕಣ್ಣು ಗಳನ್ನು ಹಿಗ್ಗಿಸಿ ನೋಡಿದನು. " ಗೋಪಾಲ ಬಾ " ಎಂದಿದ್ದುದು ನಿಜ. ಇದನ್ನು ಯಾರು ಬರೆದಿರಬಹುದು. ಕಸ್ತೂರಿ ಬರೆದಿರುವನೆನ್ನಬೇಕೇ ಅವನು ತನ್ನ ಸಂಗಡಲೇ ಇರುವನಲ್ಲ! ಹಾಗಾದರೆ ಯಾರು ಬರೆದಿರ ಬಹುದು? ಗೋಪಾಲನು ಗೋಡೆಯ ತೀರ ಹತ್ತಿರ ಹೋಗಿ ನೋಡಿದನು. ಖಡುವಿನಿಂದ ಬರೆದಿದ್ದರು. " ಗೋಪಾಲ ಬಾ " ಇದನ್ನು ಯಾರು

ಬರೆದಿರಬೇಕೆಂಬ ಯೋಚನೆಯಲ್ಲಿಯೇ ಗೋಪಾಲನು ಮನೆಗೆ ಬಂದನು ಮನೆಯ ಮುಂದಿನ ಅಂಗಳದಲ್ಲಿ ಅವನ ಅಕ್ಕ ಕೆಲವು ತನ್ನ ಗೆಳತಿಯ ರೊಡನೆ ಆಡುತ್ತಿದ್ದಳು. ಅಕ್ಕನೆಡೆಗೆ ಹೋಗಿ " ಅಕ್ಕಾ ಶಾಲೆಯ ಗೋಡೆಯ ಮೇಲೆ ನನ್ನನ್ನು " ಬಾ " ಎಂದು ಬರೆದವರಾರು ? " " ನನಗೆ ಗೊತ್ತಿಲ್ಲ ಹೋಗು " ಎಂದು ಆಟದಲ್ಲಿ ತನ್ಮಯಳಾದ ಗೋಪಾಲನ ಅಕ್ಕನು ಅವನನ್ನು ಅತ್ತ ಸರಿಸಿದಳು. ಅಲ್ಲಿ ನೆರೆದ ಎಲ್ಲ ಹುಡುಗೆಯರನ್ನೂ ಕೇಳಿ ನೋಡಿದನು ಯಾರೂ ತನಗೆ ಗೊತ್ತಿಲ್ಲವೆಂದರು.

ಗೋಪಾಲನು ಬೇಜಾರುಪಟ್ಟುಕೊಂಡನು. ಅಷ್ಟೇ ಉತ್ಸುಕನಾದನು. ತನ್ನನ್ನು ಇಷ್ಟು ವಿಶ್ವಾಸದಿಂದ " ಬಾ " ಎಂದು ಕರೆದವರು ಯಾರು ? ಮತ್ತು ಎಲ್ಲಿಗೆ ಬರಲು ಕರೆದಿರುವರು. ಎದುರು ಮನೆಯ ಸುಂದರು ಬರೆದಿರಬಹುದೇ ? ಕೇಳಬೇಕೆಂದರೆ ಸುಂದರು ತನ್ನ ತಂದೆಯ ಜೊತೆಗೆ ಊರಿಗೆ ಹೊರಟು ಹೋದನು ! ಗೋಪಾಲನ ಮನದಲ್ಲಿ ಮತ್ಯಾರ ಹೆಸರೂ ಮೂಡದಾಯಿತು. ಕಡೆಗೆ ನಿರ್ಣಯಿಸಿದನು. ಕಸ್ತೂರಿಯೇ ಬರೆದಿರಬೇಕೆಂದು ಓಡುತ್ತ ಕಸ್ತೂರಿಯ ಮನೆಗೆ ಹೋಗಿ ಕೇಳಿದನು. " ನಾನು ಬರೆಯಲಿಲ್ಲವಪ್ಪಾ " ಎಂದನು ಕಸ್ತೂರಿ ಗೋಪಾಲನು ಹತಾಶ ನಾಗಿ ಮನೆಗೆ ಬಂದನು. ಬರುವಾಗ ಅಕಸ್ಮಿಕವಾಗಿ ಶಾಲೆಯ ಗೋಡೆಯ ಕಡೆಗೆ ನೋಡಿದನು. ಅಕ್ಷರಗಳು ಕಂಡವು, " ಗೋಪಾಲ ಬಾ "

ಎದುರಿಗೆ ರಸ್ತೆಯ ಪಕ್ಕದಲ್ಲಿರುವ ಅರಳಿ ಗಿಡದ ಬುಡದಲ್ಲಿ ಕೆಲ ಹೊತ್ತು ನಿಂತು ಅದನ್ನು ಈಕ್ಷಿಸಿದನು. ಯೋಚಿಸಿದನು. ಬಗೆಹರಿಯ ಲಿಲ್ಲ. ಮನೆಗೆ ಬಂದುಬಿಟ್ಟನು.

ಅಮ್ಮನು ಅಡಿಗೆಯ ಮನೆಯಲ್ಲಿ ರಾತ್ರಿ ಅಡಿಗೆಯ ವ್ಯವಸ್ಥೆಯಲ್ಲಿದ್ದಳು. ಗೋಪಾಲನು ಅಮ್ಮನ ಹತ್ತಿರ ಹೋಗಿ " ಅಮ್ಮಾ ನನ್ನನ್ನು ಯಾವ ಹುಡುನಾದರು ಕೇಳಿಕೊಂಡು ಬಂದಿದ್ದನೇನಮ್ಮಾ ? " ಎಂದನು. " ಇಲ್ಲ ವಲ್ಲ ' ಎಂದಳು ಅವನ ತಾಯಿ ಏಳು ವರುಷದ ಗೋಪಾಲನು ತನ್ನ ತಾಯಿಗೆ ಶಾಲೆಯ ಕಂಪೌಂಡ ಗೋಡೆಯ ಮೇಲೆ ತನ್ನನ್ನು " ಬಾ " ಎಂದು ಕರೆದು ಬರೆದಿರುವದನ್ನು ಹೇಳಿದನು.

" ಒಂದು ವೇಳೆ ಎದುರಿನ ಮನೆ ಸುಂದರು ಬರೆದಿರಬಹುದು. " ಎಂದಳು ತಾಯಿ. " ಇಲ್ಲ ಅಮ್ಮಾ, ಆವನು ಬೆಳಿಗ್ಗೆ ತನ್ನ ತಂದೆಯ ಜೊತೆಯಲ್ಲಿ ಊರಿಗೆ ಹೋದನು.

" ಬೆಳಿಗ್ಗೆ ಊರಿಗೆ ಹೋಗುವ ಮೊದಲು ಬರೆದಿರಬಹುದು "

" ಇಲ್ಲ ಅಮ್ಮಾ, ಬೆಳಿಗ್ಗೆ ನಾನು ಆ ಕಡೆ ಹೋದಾಗ ಆ ಅಕ್ಷರ ಗಳಿರಲಿಲ್ಲ "

" ಇರಲಿ ಬಿಡು ಮಗು. ಇದಾವ ದೊಡ್ಡ ವಿಷಯ. ಊಟ ಮಾಡಿ ಮಲಗು. ನಾಳೆ ತಾನೇ ತಿಳಿಯುವದು ' ಎಂದಳು.

ತಾಯಿಯು ಈ ಮಾತಿಗೆ ಗೋಪಾಲನು ತೃಪ್ತನಾಗಲಿಲ್ಲ. ತಂದೆಯು ಕಡೆಗೆ ತಿರುಗಿದನು. ತಂದೆ ಇನ್ನೂ ಬಂದಿರಲಿಲ್ಲ. ಅಡಿಗೆಯ ಮನೆಗೆ ಹೋಗಿ ಊಟಕ್ಕೆ ಕುಳಿತನು. ತಾಯಿ ಬಡಿಸತೊಡಗಿದಳು.

" ಅಮ್ಮಾ ದೇವರಿಗೆ ಬರೆಯಲು ಗೊತ್ತೇ ? "

" ಗೊತ್ತು, ಆದರೆ ಅವನು ನಮ್ಮಂತೆ ಬರೆಯುವದಿಲ್ಲ. "

" ಮತ್ತ್ಯಾಗೆ ಬರೆಯುವನು? "

"ಅವನು ಯಾರಿಗೂ ಕಾಣಿಸದಂತೆ ಎಲ್ಲರ ಹಣೆಯಲ್ಲಿಯೂ ಬರೆಯು ವನು "

"ಯಾತರಿಂದ ಬರೆಯುವನು? ಖಡುವನ್ನು ಉಪಯೋಗಿಸುವದಿಲ್ಲವೇ?"

ಈ ಪ್ರಶ್ನೆಗೆ ತಾಯಿಯು ಉತ್ತರ ಕೊಡಲು ಶಕ್ತಳಾಗಲಿಲ್ಲ.

" ಅದೆಲ್ಲ ಈಗ ಹೇಳಿದರೆ ಗೊತ್ತಾಗಲಾರದು. ದೊಡ್ಡವನಾದ ಮೇಲೆ ತಾನೇ ತಿಳಿಯುವದು. ಬೇಗ ಊಟ ಮಾಡಿ ಮಲಗು " ಎಂದಳು.

ತಂದೆಯು ಮನೆಗೆ ಬಂದನು. ಏಕೋ ಅವನು ಗಂಭೀರವಾಗಿ ಕಂಡದ್ದರಿಂದ ಗೋಪಾಲನು ಅವನ ಗೊಡವೆಗೆ ಹೋಗಲಿಲ್ಲ. ಊಟ ಮುಗಿಸಿ ಮಲಗಿದನು. ಎಷ್ಟು ಹೊತ್ತಾದರೂ ನಿದ್ದೆಯೇ ಬರಲಿಲ್ಲ. ಕಣ್ಣು ತೆರೆದುಕೊಂಡೇ ಮಲಗಿದ್ದನು. " ಗೋಪಾಲ ಬಾ " ಎಂದು ಯಾರು ಬರೆದಿರಬಹುದು ಎಂಬ ಯೋಚನೆಯಲ್ಲಿಯೇ ಅತ್ತಿತ್ತ ಉರುಳಾಡುತ್ತಿದ್ದನು.

ಚಂದ್ರನ ಬೆಳಕು ಕಿಡಿಕಿಯಿಂದ ಮೆಲ್ಲನೆ ಒಳಗೆ ಬಂದಿತು. ನಿಧಾನ ವಾಗಿ ನೆಲದ ಮೇಲಿಂದ ಹರಿದು ಗೋಡೆಯನ್ನೇರಿತು. ಗೋಪಾಲನು ಮಂಚವನ್ನು ಇಳಿದು ಕಿಡಿಕೆಯ ಹತ್ತಿರ ಹೋಗಿ ಬಗ್ಗಿ ನೋಡಿದನು. ಆಕಾಶದಲ್ಲಿಯ ಪೂರ್ಣ ಚಂದ್ರಮನು ಶೀತಲ ಛಾಯೆಯನ್ನು ಬೀರುತ್ತಿದ್ದಾನೆ. ಎಲ್ಲೆಲ್ಲಿಯೂ ನಿಶ್ಶಬ್ದ. ಮರಗಳು, ಪಕ್ಷಿಗಳು, ಎಲ್ಲವೂ ನಿದ್ರೆ ಮಾಡುತ್ತಿದ್ದವು.

ಗೋಪಾಲನು ಮೆಲ್ಲಗೆ ತುದಿಗಾಲಿನಿಂದ ಬೆಕ್ಕಿನಂತೆ ತೆರಬಾಗಿಲಿನ ವರೆಗೆ ಹೋದನು. ಅದನ್ನು ಎಷ್ಟು ಮೆತ್ತಗೆ ತೆರೆದು ಹೊರಗೆ ನುಸುಳಿದನೋ ಅಷ್ಟೇ ಮೆತ್ತಗೆ ಬಾಗಿಲನ್ನು ಇಕ್ಕಿಕೊಂಡನು. ನೇರವಾಗಿ ಶಾಲೆಯ ಕಡೆಗೆ ನಡೆದನು. ಭರದಿಂದ ಸಾಗಿ ಶಾಲೆಯ ಕಂಪೌಂಡ ಗೋಡೆಯ ಹತ್ತಿರಕ್ಕೆ ಬಂದನು.

ಬೆಳ್ಳಗೆ, ಬೆಳದಿಂಗಳಿಗಿಂತಲೂ ಬೆಳ್ಳಗೆ ಇರುವ ಖಡುವಿನಿಂದ ಬರೆದ ಅಕ್ಷರಗಳನ್ನು ಗೋಪಾಲನಿಗೆ ಸ್ಪಷ್ಟವಾಗಿ ಕಂಡವು. ಗೋಡೆಯು ಮಾತಾಡುವಂತೆ ಅವನಿಗೆ ಭಾಸವಾಯಿತು.

" ಗೋಪಾಲ ಬಾ "

ಗೋಪಾಲನ ಕಣ್ಣುಗಳಲ್ಲಿ ಮುತ್ತಿನಂತಹ ಎರಡು ಕಣ್ಣೀರಿನ ಹನಿಗಳು ಕಾಣಿಸಿಕೊಂಡು ಉರುಳಿ ಬಿದ್ದವು. ಪುನಃ ಒಂದು ಸಲ ಅದನ್ನು ಓದಿ ಕಸ್ತೂರಿಯ ಮನೆಗೆ ನಡೆದನು.

ಗೋಪಾಲನ ಮನೆಯಂತೆ ಕಸ್ತೂರಿಯ ಮನೆಯೂ ನಿದ್ರಾದೇವಿಯ ಒಡಲಲ್ಲಿ ಮುಳಿಗಿದ್ದಿತು. ಕಿಡಿಕಿಯಿಂದ ಕಸ್ತೂರಿ ಮಲಗಿರುವ ಕೋಣೆಯಲ್ಲಿ ಇಣಿಕಿ ನೋಡಿದನು. ಕಸ್ತೂರಿಯು ನಿದ್ರಿಸುತ್ತಿದ್ದನು.

ಕಸ್ತೂರಿಯನ್ನು ಗಟ್ಟಿಯಾಗಿ ಕೂಗಿ ಎಬ್ಬಿಸಿ ಈ ಮನೋಹರವಾದ ಬೆಳದಿಂಗಳಲ್ಲಿ ಅವನ ಕೂಡ ಆಟವಾಡಬೇಕೆಂದೆನಿಸಿತು ಗೋಪಾಲನಿಗೆ. ಆದರೆ ಏಕೋ ಧೈರ್ಯವಾಗಲೊಲ್ಲದು. ತಿರುಗಿ ಹಾಗೆಯೇ ಶಾಲೆಗೆ ಬಂದು ಸೇರಿದನು. ಏನು ಆಡಬೇಕೆಂಬುದು ತೋಚದೇ ಶಾಲೆಯ ಎದುರಿ

ಗಿರುವ ತಾವರೆಯ ಕೊಳಕ್ಕೆ ಹೋಗಿ ತಮಾಷೆ ಮಾಡತೊಡಗಿದನು. ನಿರ್ಮಲವಾದ ನೀರಿನಲ್ಲಿ ಚಂದ್ರಮನ ಬಿಂಬವು ಗೋಪಾಲನ ಹೃದಯಕ್ಕೆ ಬಹಳ ಉತ್ಸಾಹವನ್ನು ತಂದಿತು. ತಾವರೆಯ ಬಳ್ಳಿಯು ಅನೇಕ ಮೊಗ್ಗೆಗಳನ್ನು ಬಿಟ್ಟಿದ್ದಿತು. ಆ ಬಳ್ಳಿಯ ಎಲೆಯ ಮೇಲೊಂದು ಕಪ್ಪೆಯು ಕುಳಿತಿತ್ತು. ಕಪ್ಪೆಗೆ ಈ ಬೆಳದಿಂಗಳ ಶೋಭೆಯನ್ನು ಭೋಗಿಸಲು ಗೊತ್ತು ! ಆಗಾಗ ಕರ್ಕಶಧ್ವನಿ ಮಾಡಿ ಶಾಂತತೆ ಭಂಗಪಡಿಸುತಿತ್ತು. ಒಮ್ಮೆ ಕಪ್ಪೆಯು "ಕರ್‌ಕ್" ಎಂದಿತು. ಗೋಪಾಲನಿಗೆ ಅಸಹ್ಯವೆನಿಸಿತು. ಜೇಬಿನಲ್ಲಿಯ ಒಂದು ಕಲ್ಲನ್ನು ತೆಗೆದು ಅದರ ಕಡೆಗೆ ಬೀಸಿದನು. ಕಲ್ಲೂ ಮುಳುಗಿತು. ಕಪ್ಪೆಯೂ ಜಿಗಿದು ನೀರಿನಲ್ಲಿ ಹಾರಿತು. ಕೆಲ ಹೊತ್ತು ಅಲ್ಲಿಯೇ ಅಲೆದಾಡಿ ಗೋಪಾಲನು ಪುನಃ ಅರಳೀಮರದ ಬುಡಕ್ಕೆ ಬಂದು ಶಾಲೆಯ ಗೋಡೆಯ ಮೇಲೆ ನೋಡಿದನು.

"ಗೋಪಾಲ ಬಾ"

ಗೋಪಾಲನಿಗೆ ಈಗ ಹೇಗೆ ಹೇಗೋ ಅನಿಸಿತು. ಈ ನಿಶ್ಶಬ್ದವಾದ ನಡುರಾತ್ರಿಯಲ್ಲಿ "ಗೋಪಾಲ ಬಾ" ಎಂದು ಯಾರೋ ತನ್ನನ್ನು ಕರೆಯು ವಂತೆ ಭಾಸವಾಯಿತು. ಮತ್ತೊಂದು ಕಡೆಗೆ ನೋಡಿದನು. ಅಲ್ಲಿ ಮುನಸೀಪಾಲಿಟಿಯ ಸಾರ್ವಜನಿಕ ನಳದ ಕಟ್ಟೆಯಿದ್ದಿತು. ನಳದ ಬೂಚು ತುಸು ಸರಿದಿದ್ದರಿಂದ ನೀರು ತಟತಟನೇ ಬೀಳತೊಡಗಿತ್ತು. ಗೋಪಾಲನಿಗೆ ಒಮ್ಮೆಲೇ ನೆನಪಾಯಿತು. ಹಾಲಿನಾಕೆಯು ಇಲ್ಲಿಯೇ ಈ ನಳದಿಂದಲೇ ಹಾಲಿಗೆ ನೀರು ಬೆರಸಿ ತನ್ನ ಮನೆಗೆ ತರುವಳೆಂದು ಅಮ್ಮನು ಗೋಪಾಲನಿಗೆ ಹೇಳಿದ್ದಳು. ಈಗ ಬೆಳಗಾಗುವ ಹೊತ್ತಾಯಿತು. ಹಾಲಿನಾಕೆಯು ಬರುವಳು. ತಾನು ಇಲ್ಲಿ ಇದ್ದದ್ದು ಅವಳು ನೋಡಿ ಅಮ್ಮನಿಗೆ ಹೇಳುವಳು. ಅಮ್ಮನು.......ಆದ್ದರಿಂದ ತಾನು ಈಗಲೇ ಮನೆಗೆ ಹೋಗಿಬಿಡಬೇಕೆಂದು ಗೋಪಾಲನು ನಿರ್ಧರಿಸಿದನು.

ಅಷ್ಟರಲ್ಲಿ ಹಿಂದಿನಿಂದ ಯಾರೋ "ಗೋಪಾಲಾ..." ಎಂದಂತಾಯಿತು. ಗೋಪಾಲನು ಗಾಬರಿಯಾಗಿ ಹಿಂದೆ ತಿರುಗಿ ನೋಡಿದನು.

ಆಶ್ಚರ್ಯ! ಆರಳೀಗಿಡದ ಬುಡದಲ್ಲಿ ಒಬ್ಬ ದೊಡ್ಡ ಆಜಾನುಬಾಹು ಮನುಷ್ಯ, ಟೊಂಕದವರೆಗೆ ಇಳಿಬಿದ್ದ ಬಿಳಿ ಗಡ್ಡ ಮೀಸೆಗಳುಳ್ಳವನು ನಿಂತಿದ್ದಾನೆ. ಗೋಪಾಲನು ಬಹಳ ಅಂಜಿದನು. ನಡುಗುತ್ತಲೇ ಅವನೆಡೆಗೆ ಬಂದು " ನೀನು ಯಾರು " ಎಂದನು.

" ನಾನು 'ಗಡ್ಡದ ಬಾವಾ' ನಿನ್ನನ್ನು ಹಿಡಿದುಕೊಂಡು ಹೋಗಲು ಬಂದಿದ್ದೇನೆ. ನಿನ್ನನ್ನು ಈ ರೀತಿ ಈ ನಡುರಾತ್ರಿಯಲ್ಲಿ ಇಲ್ಲಿಗೆ ಬರುವಂತೆ ಮಾಡಲು ನಾನೇ ನಿನ್ನ ಶಾಲೆಯ ಕಂಪೌಂಡ ಗೋಡೆಯ ಮೇಲೆ ' ಗೋಪಾಲ ಬಾ ' ಎಂದು ಬರೆದಿದ್ದೇನೆ" ಎಂದನು.

ಪಾಪ ! ಚಿಕ್ಕ ಗೋಪಾಲನಿಗೆ ಎಲ್ಲವೂ ಅರ್ಥವಾಗಿ ಬಿಟ್ಟಿತು. ಚಿಕ್ಕ ಚಿಕ್ಕ ಬಾಲಕರನ್ನು ಹಿಡಿದುಕೊಂಡು ಕರೆದೊಯ್ಯಲು ಗಡ್ಡದ ಬಾವಾ ಬರುವನೆಂಬ ಬಗ್ಗೆ ಅಮ್ಮನು ಹೇಳಿದ ಕತೆಗಳೆಲ್ಲವೂ ನೆನಪಾದವು. ಹಾಗಾದರೆ, ಅಮ್ಮನು ಹೇಳಿದ್ದು ನಿಜವೆಂದುಕೊಂಡನು

ತನ್ನ ಹಿಂದೆ ಬರಲು ಗಡ್ಡದ ಬಾವಾ ಸಂಜ್ಞೆ ಮಾಡಿದನು. ಗೋಪಾಲನಿಗೆ ಅಳುವು ಬಂದುಬಿಟ್ಟಿತು. ಅಳಬೇಕೆಂದರೆ ಏಕೋ ಬಾಯಿಯೇ ಬಾರದು. ಹೇಳಿದಂತೆ ನಡೆಯದಿದ್ದರೆ " ಬಾವಾ " ನುಂಗಿಬಿಟ್ಟಾನು. ಗೋಪಾಲನು ಬಾವಾನ ಹಿಂದೆಯೇ ನಡೆದನು. ಬಹುದೂರ ಉಗಿ ಬಂಡಿಯು ಕೂಗುವ ಧ್ವನಿ ಕೇಳಿಸಿತು. " ಬಾವಾ " ಗೋಪಾಲನನ್ನು ನಿಲ್ದಾಣಕ್ಕೆ ಕರೆದೊಯ್ದನು. ನಿಲ್ದಾಣದಲ್ಲಿ ಗದ್ದಲ ಬಹಳ. ಗಾಡಿ ಬಂದಿತು. ಆ ಮೇಲೇನು ಗದ್ದಲದ ಅಬ್ಬರವನ್ನು ಕೇಳುವದು? ಜನ ಸಾಗರವು ಗಾಡಿಯೊಳಗೆ ನುಗ್ಗುತ್ತಿದೆ. ಗಾಡಿಯಿಂದ ಹೊರಬೀಳುತ್ತಿದೆ. " ಗಡ್ಡದಬಾವಾ " ಗೋಪಾಲನ ಕೈ ಹಿಡಿದೆಳೆದು ಗಾಡಿಯಲ್ಲಿ ಒಗೆದು ತಾನೂ ಜಿಗಿದು ಕುಳಿತುಕೊಂಡನು. ಅದೇ ಡಬ್ಬಿಯಿಂದ ಕೆಳಗೆ ಇಳಿಯುತ್ತಿರುವ ಗೋಪಾಲನ ಭಾವನು ಇದನ್ನು ಆಕಸ್ಮಾತ್ತಾಗಿ ನೋಡಿ ಆಶ್ಚರ್ಯದಿಂದ ಕೇಳಿದನು. " ಗೋಪಾಲಾ ನೀನೆಲ್ಲಿ ಹೊರಟೆ ? " ಗೋಪಾಲನು ಮಾತಾಡುವಂತಿರಲಿಲ್ಲ. ಬಾವಾನನ್ನು ಕಣ್ಸನ್ನೆಯಿಂದ ತೋರಿಸಿದನು

ಗೋಪಾಲನ ಭಾವನಿಗೆ ಕೂಡಲೇ ಅರ್ಥವಾಗಿ ಬಿಟ್ಟಿತು. ಮಕ್ಕಳ ಕಳ್ಳನಾದ ಗಡ್ಡದಬಾವಾ ತಮ್ಮ ಗೋಪಾಲನನ್ನು ಹಿಡಿದುಕೊಂಡು ಹೊರಟಿದ್ದಾನೆಂದು. ಕೂಡಲೇ ಭಾವನವರು ಕೂಗಿಕೊಂಡರು. "ಮಕ್ಕಳ ಕಳ್ಳನಿವ, ಹಿಡಿಯಿರಿ ಹೊಡೆಯಿರಿ" ಎಂದು. ಗಡ್ಡದಬಾವಾ ತಪ್ಪಿಸಿಕೊಂಡು ಓಡಿಹೋಗಲು ಬಹಳ ಪ್ರಯತ್ನಿಸಿದನು. ಆದರೆ ನಿಲ್ದಾಣದ ಜನಜಂಗುಳಿಯಿಂದ ತಪ್ಪಿಸಿಕೊಂಡು ಹೋಗಲು ಸಾಧ್ಯವೇ! ಎಲ್ಲರೂ ಬಾವಾನನ್ನು ಹಿಡಿದರು. ಅವನ ಬೆನ್ನ ಮೇಲೆ ಪೆಟ್ಟುಗಳನ್ನು ಹಾಕಹತ್ತಿದರು. ಆದರೆ ಆ ಪೆಟ್ಟುಗಳೆಲ್ಲವೂ ತನ್ನ ಬೆನ್ನ ಮೇಲೆ ಬಿದ್ದಂತೆ ಗೋಪಾಲನಿಗೆ ಅನಿಸ ಹತ್ತಿತು. ಅವನ ಬೆನ್ನು ನೋಯುತೊಡಗಿತು.

ಅಮ್ಮನು ಕೂಗಿದಳು. "ಮಗೂ ಗೋಪಾಲಾ! ಏಳಪ್ಪಾ ಇಂದು ದೀಪಾವಳೀ. ಎರೆದುಕೊಳ್ಳಬೇಕು" ಎಂದು ಬೆನ್ನು ತಟ್ಟಿ ತಟ್ಟಿ ಅವನನ್ನು ಎಬ್ಬಿಸಿದಳು. ಗೋಪಾಲನು ನಿದ್ರೆ ತಿಳಿದು ಎದ್ದನು. ತನ್ನ ತಾಯಿಯು ಬೆನ್ನು ತಟ್ಟುತ್ತಿದ್ದಾಳೆ. ಕಣ್ಣು ಉಜ್ಜಿಕೊಂಡನು. ಸುತ್ತಲೂ ನೋಡಿದನು. ಇದು ಕನಸು. ನಿಜವಲ್ಲ. ಎಂದು ತಿಳಿದು ನಗುತ್ತ ಎದ್ದನು.

ಹೊರಗೆ ಭಾವನವರು ಗಾಡಿಯಿಂದ ದೀಪಾವಳಿ ಹಬ್ಬಕ್ಕೆಂದು ಬಂದವರು ಟಾಂಗಾ ಇಳಿದರು, ಗೋಪಾಲನಿಗಾಗಿ ಅನೇಕ ವಿಧವಿಧದ ಪಟಾಕ್ಷಿಗಳನ್ನು ತಂದಿದ್ದರು. ಅವನ್ನೆಲ್ಲವನ್ನೂ ಹಾರಿಸುವದರಲ್ಲಿ ಇಡೀದಿನವನ್ನೇ ಕಳೆದನು.

ಸಂಜೆಯಲ್ಲಿ ಅಕ್ಕ ಭಾವಂದಿರಕೂಡ ಗೋಪಾಲನು ಹೊರಗೆ ಅಲೆದಾಡಲು ಪೇಟೆಗೆ ಹೋದನು. ಅಲ್ಲಿ ಅವನ ಗೆಳೆಯ ಚಂದು (ಚಂದ್ರಸೇಖರ) ನ ಭೆಟ್ಟಿ ಆಯಿತು. "ನಿನ್ನೆ ಎಲ್ಲಿ ಹೋಗಿದ್ದೆಯೋ ಗೋಪಾಲಾ ಮನೆ ಬಿಟ್ಟು" ಚಂದು ಕೂಗಿದನು "ನಾನು ನಿನ್ನ ಮನೆಗೆ ಬಂದಿದ್ದೆನು. ನಿನ್ನನ್ನು ಕಾಣಲಿಲ್ಲ. 'ನನ್ನ ಮನೆಗೆ ಬಾ' ಎಂದು ಸೂಚಿಸುವಂತೆ "ಗೋಪಾಲ ಬಾ" ಎಂದು ಶಾಲೆಯ ಕಂಪೌಂಡ ಗೋಡೆಯ ಮೇಲೆ ಬರೆದಿಟ್ಟದ್ದೆನು. ನೀನು ಓದಲಿಲ್ಲವೆಂಬಂತೆ ತೋರುವದು" ಎಂದನು.

## ಮೂಗು ಬೊಟ್ಟು.

ಹೋದವರುಷ ದೀಪಾವಳೀ ಹಬ್ಬ ಹಾಗಾಯಿತು—ಜಗಳವೂ, ಮನಸ್ತಾಪವೂ, ದುಃಖವೂ, ಅಳುವದೂ ಆಗಿ ಹೋಯಿತು.— ನಾಳೆ ರಾತ್ರಿ ದೀಪಾವಳೀ ಪ್ರಾರಂಭವೆಂದರೆ, ಈ ದಿನ ರಾತ್ರಿ ಗೀತಾ (ನನ್ನ ಮಡದಿ) ಮೂನ್ನೂರಾಎಪ್ಪತ್ತು ರೂಪಾಯಿ ಬೆಲೆಬಾಳುವ ಮೂಗು ಬೊಟ್ಟನ್ನು ಕಳೆದುಕೊಂಡು ನನ್ನೆದುರು ಬಂದು ನಿಂತಳು. " ಹೋದರೆ ಹೊಗಲಿ " ಎನ್ನುವ ಸ್ಥಿತಿಯಲ್ಲಾದರೂ ಇದ್ದೇವೆಯೇ ನಾವು !

ಗೀತಾ ತುಸು ಸಿಡುಕು ಸ್ವಭಾವದಳು, ಅವಳು ಮನೆಗೆ ಬಂದಾಗಿನಿಂದಲೂ ಅವಳ ಮಾತು ನಾನು ಕೇಳುವದೇ ಹೊರ್ತು ನನ್ನ ಮಾತು ಅವಳು ಒಮ್ಮೆ ಸಹ ಕೇಳಿದವಳಲ್ಲ. ಆಯಿತು. ತನ್ನ ಇಷ್ಟದಂತೆ ಮಾಡಲಿ ಎಂದು ನಾನು ಸುಮ್ಮನಾಗಿ ಬಿಟ್ಟಿರುವೆನು. ನಾನು ಹೇಳಿದಂತೆ ಕೇಳಿದ್ದರೆ ಮೂಗುಬೊಟ್ಟು ಕಳೆದು ಹೋಗುತ್ತಿತ್ತೆ ?

ನಮ್ಮ ಬಂಗ್ಲೆಯ ಪಕ್ಕದ ಬಂಗ್ಲೆಯವರ ಮನೆಯವಳ ಜೊತೆಗೆ ನಮ್ಮವಳ ಸ್ನೇಹ. ಆ ನಿರ್ಮಲಾನ ಸ್ನೇಹ ಮಾಡಬೇಡವೆಂದು ಎಷ್ಟು ಸಲ ಹೇಳಿದರೂ ನಮ್ಮ ಗೀತಾ ನನ್ನ ಮಾತು ಕೇಳಲಿಲ್ಲ. 'ನಿರ್ಮಲಾ' ಅಂದರೆ ತೀರ ಸುಧಾರಕ ಪಂಥಕ್ಕೆ ಸೇರಿದವಳು. ಕ್ಲಬ್ಬಿಗೆ ಹೋಗುವಳು. ನಾಟಕ, ಸಿನೇಮಾ, ವ್ಯಾಖ್ಯಾನ, ಫುಟಬಾಲ, ಮ್ಯಾಚ, ಎಲ್ಲಿ ನೋಡಿದಲ್ಲಿ ನಿರ್ಮಲಾ ಇದ್ದೇ ಇರುವಳು. ಅವಳ ಜೊತೆಗೆ ಗೀತಾ ಇರದಿದ್ದರೆ ನಡೆದೀತೇ? ಆ ದಿನ ಸಂಜೆಗೆ ನಿರ್ಮಲೆಯ ಜೊತೆಗೆ ಗೀತಾ ಹೋಗಿ ಊರು ಸುತ್ತಾಡಿ ಬಂದಳು. ಮೂಗುಬಟ್ಟು ಕಳೆದು ಕೊಂಡಳು.

ಆ ಮೂಗುಬಟ್ಟು, ಅವಳ ತೌರು ಮನೆಯ ಆಸ್ತಿ. ಅವಳ ತಂದೆಯಿಂದ ಆ ಮೂಗು ಬಟ್ಟನ್ನು ಕಸೆಯಲು ನಮ್ಮ ತಂದೆ ಹೂಡಿದ ಆಟ, ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಗೀತಾನ ತಂದೆಯೇನು ಸಾಮಾನ್ಯರೇ ಅಬಾ! ಬಾ!.... ಗೀತಾಳ ತಂದೆ ಕಲ್ಲಿನಿಂದ ನೀರು ತೆಗೆಯುವ ವ್ಯಕ್ತಿ. ನಮ್ಮ ತಂದೆ ಮರಳನ್ನು ನೀರಿನಂತೆ ಹಂಬಿಡಬಲ್ಲ. ಗೀತಾಳ ತಂದೆ, ಆದೇಕೆ ನನ್ನ ಮಾವರಿರು ಅಂದು ಬಿಡೋಣ. ದೊಡ್ಡ ಹುದ್ದೇದಾರರು. ಪೋಲೀಸ ಇನಸ್ಪೆಕ

ರ್‌ರು. ತಿಂಗಳಿಗೆ ನಾನೂರು ರೂಪಾಯಿ ಸಂಬಳ. ಮಹಾ ಕೃಪಣ. ಜೀವ ಬಿಡುವೆನೆಂದರೂ ಒಬ್ಬರಿಗೆ ಒಂದು ಕಾಸು ಕೂಡ ಕೊಡುವವನಲ್ಲ ಕಡಿಮೇ ಖರ್ಚಿನಲ್ಲಿ ವರಸಿಕ್ಕಬೇಕೆಂಬ ಹವಣಿಕೆಯಲ್ಲಿಯೇ ಗೀತಾಗೆ ಹತ್ತೊಂಬತ್ತು ವರುಷಗಳು ಕಳೆದು ಹೋದವು. ಮಗಳ ಮದುವೆಯ ಪ್ರಸ್ತಾಪ ತೆಗೆದು ನನ್ನ ಅತ್ತೆಯವರು ಮಾವನ ಕೂಡ ದಿನಾಲು ಜಗಳ ಮಾಡುತ್ತಿದ್ದರಂತೆ. "ಏನು ಮಾಡು ಅನ್ನುತ್ತೀ. ಸಿಕ್ಕಸಿಕ್ಕವರಿಗೆ ಮಗಳನ್ನು ಕೊಟ್ಟು ಬಿಡು ಅನ್ನುವಿಯಾ? ಒಂದು ಪರೀಕ್ಷೆ ಪಾಸಾಗುವರೋ ಇಲ್ಲವೋ ೨ ಸಾವಿರ ೪ ಸಾವಿರ ವರದಕ್ಷಿಣೆ ಕೇಳುವರು. ಅಯೋಗ್ಯರು. ತಡಿ. ವೇಳೆ ಬರುವದು. ಯಾವುದಕ್ಕೂ ವೇಳೆ ಬರಬೇಕು" ಎನ್ನುವರು. "ದುಡ್ಡು ಯಾರ ಸಲುವಾಗಿ ಗಳಿಸುವಿರಿ? ಎನ್ನುವಳು ನನ್ನ ಅತ್ತೆ. ಇವರಿಗೆ ಸುರಿಯಲಿಕ್ಕೇನು? ಎಂದು ಸಿಟ್ಟಿನಿಂದ ಬುಸುಗುಟ್ಟುತ್ತ ನನ್ನ ಮಾವಂದಿರು ಹೋಗಿಬಿಡುವರು.

ನನ್ನ ತಂದೆಯು ಆಶೆಗೂ ಮಿತಿ ಇಲ್ಲ. ನಾನು B. A. ಆದ ಮೇಲೆ ಎರಡು ವರುಷ ಮನೆ ಹಿಡಿದು ಕುಳಿತೆನು. ಎಲ್ಲಿಯಾದರೂ ನೌಕರಿ ನೋಡೋಣವೆಂದರೆ ತಂದೆಯವರ ಅಡ್ಡಿ. "ಹೋಗೋ ಮೂರ್ಖ, ಸುಮ್ಮ ನಿರೋ ನನಗೆಲ್ಲಾ ಗೊತ್ತಿದೆ. ನಿನಗೆ ನೌಕರಿ ಕೊಡುವವರಾದರೂ ಯಾರು? ಒಂದು ವೇಳೆ ಸಿಕ್ಕರೆ ತಿಂಗಳಾ ೪೦ ರೂಪಾಯಿಗಿಂತ ಹೆಚ್ಚಿನ ಸಂಬಳದ ನೌಕರಿ ನಿನಗೆ ಸಿಕ್ಕದು. ಅಷ್ಟು ಸಂಬಳದಲ್ಲಿ ಇದ್ದಿಯಾದರೆ ನಿನಗೆ ಕನ್ಯಾ ಕೊಡುವವರು ವರದಕ್ಷಿಣೆ ಎಷ್ಟು ಕೊಡುವರು? ಮಗನು ಆಯ್. ಸಿ. ಎಸ್. ಕ್ಕೆ ಓದುವವನಿದ್ದಾನೆಂದು ನಾನು ದೇಶದಲ್ಲೆಲ್ಲ ಸುದ್ದಿ ಬೀರಿದ್ದೇನೆ. ಅಂದರೆ ಎಂಟು ಹತ್ತು ಸಾವಿರ ರೂಪಾಯಿ ವರದಕ್ಷಿಣೆ ಕೊಡುವವನು ಮುಂದೆ ಬಂದಾನು.ಒಮ್ಮೆ ಲಗ್ನವಾಗಿ ಬಿಟ್ಟರೆ ನೀನು ಯಥೇಷ್ಟವಾಗಿ ನೌಕರಿಗೆ ಹೋಗ ಬಹುದು. ಅಲ್ಲಿಯವರೆಗೂ ಬೇಡ." ಎಂದರು. ಆದರೆ ಇವನ್ನೆಲ್ಲ ಕೇಳಿಯೂ ಗೀತಾನ ತಂದೆಯು ವರದಕ್ಷಿಣೆ, ವರೋಪಚಾರ, ಬೆಳ್ಳಿ ಹಿತ್ತಾಳಿ ಪಾತ್ರೆಗಳು ಎಲ್ಲವನ್ನೂ ಸೇರಿಸಿ ಎರಡು ಸಾವಿರದ ಮೇಲೆ ಒಂದು ಕಾಸೂ ಆಗದೆಂದರು.

ಕಡೆಗೆ ಹಗ್ಗ ಹರಿಯಲಿಲ್ಲ ಕೋಲು ಮುರಿಯಲಿಲ್ಲ. ಗೀತಾನೇ ನನಗೆ ಗಂಟು ಬಿದ್ದಳು. ಆಗ ಅವಳ ಕಿವಿಯಲ್ಲಿ ವಜ್ರದ ಬೆಂಡೋಲೆ, ಕುತ್ತಿಗೆಯಲ್ಲಿ

ಎರಡು ಎಳೆಗಳಸರ, ಕೈಯಲ್ಲಿ ಮೂರು ಜೊತೆ ಬಳೆಗಳು, ಮೂಗಿನಲ್ಲಿ ವಜ್ರದ ಮೂಗುಬೊಟ್ಟು ಹಾಕುತ್ತೇವೆಂದು ಮಾತನಾಡಿದರು. ಬಂಗಾರದ ಪಟ್ಟಿಯನ್ನು ಹಾಕುವದಾಗಿ ನಮ್ಮ ಮಾವನವರು ಅಂದರು. ಮೂಗು ಬೊಟ್ಟನ್ನು ಬಿಟ್ಟು ಉಳಿದ ಎಲ್ಲ ಒಡವೆಗಳು ಮದುವೆಯಲ್ಲಿ ಬಂದೇ ತಾದವು. ಮೂಗುಬೊಟ್ಟಿಗಾಗಿ ನನ್ನ ತಂದೆಯವರು ಜಗಳ ಹೂಡಿದರು. " ಪಟ್ಟಿ ಯನ್ನು ಕೊಡುವಾಗ ಅದನ್ನು ಕೊಡುತ್ತೇವೆ " ಎಂದು ಹೇಳಿ ನನ್ನ ಮಾವ ನವರು ವಿವಾಹ ಮುಗಿಸಿದರು.

ಇನ್ನೇನು? ತಂದೆಯ ಇಚ್ಛೆಯ ಪ್ರಕಾರ ನಾನು ನೌಕರಿಗಾಗಿ ಅಲೆಯಲು ಅಡ್ಡಿ ಇಲ್ಲ. ಅಕೌಂಟಂಟ್ ಜನರಲ್ ಆಫೀಸದಲ್ಲಿ ನನಗೆ ೪೫ ರೂ. ಒಂದು ನೌಕರಿ ಸಿಕ್ಕಿತು. ಇದಾಗಿ ಒಂದು ವರುಷವಾದರೂ ನನ್ನ ಮಾವನವರು ಬಂಗಾರದ ಪಟ್ಟಿಯನ್ನಾಗಲೀ, ಮೂಗುಬೊಟ್ಟನ್ನಾಗಲೀ ನನ್ನ ಹೆಂಡತಿಗೆ ಕೊಡಲಿಲ್ಲ. ನನ್ನ ತಂದೆಯವರು ಸಿಟ್ಟಿಗೆದ್ದು ಕಾಗದದ ಮೇಲೆ ಕಾಗದ ಬರೆದರು. ನನ್ನ ಮಾವನವರೂ ಬಹಳ ಸಿಟ್ಟಿನವರು. ಅವರೂ ಅನೇಕ ಪತ್ರ ಬರೆದರು. ಇಬ್ಬರಲ್ಲಿಯೂ ಜಗಳವಾಯಿತು. ಮಧ್ಯಸ್ತಿಕೆ ಮಾಡಿ ಊರವರೆಲ್ಲರೂ ಇಬ್ಬರನ್ನೂ ಶಾಂತ ಪಡಿಸಿದರು. ಕಡೆಗೆ ಮೂಗುಬೊಟ್ಟು ಕೊಡುವದಾಗಿ ಪಂಚರು ನಿರ್ಣಯಿಸಿದರು. ಅದರ ಬೆಲೆ ಮುನ್ನೂರಾ ಎಪ್ಪತ್ತು ರೂಪಾಯಿಗಳೆಂದು ಮಾವನವರು ಹೇಳಿದರು. ಇನ್ನೂರಾದರೆ ಇದಕ್ಕೆ ಬೆಲೆ ಹೆಚ್ಚಾಯಿತೆಂಬುದು ತಂದೆಯವರ ಅಭಿಪ್ರಾಯ.

ಇಷ್ಟು ಕಷ್ಟಪಟ್ಟು ಸಂಪಾದಿಸಿದ ಮೂಗುಬೊಟ್ಟು ಈಗ ಗೀತಾ ಕಳೆದು ಬಿಟ್ಟಿದ್ದಾಳೆ.

ಮೂಗುಬೊಟ್ಟು ಕಳೆದು ಹೋದರೆ ಅದರ ಬದಲು ಇನ್ನೊಂದು ತಂದು ಕೊಡುವದಾಗುತ್ತದೆಯೇ ಈಗಿನ ಕಾಲದಲ್ಲಿ? ನನ್ನ ಯೋಗ್ಯತೆ ಏನು? ಎರಡು ವರುಷದ ನೌಕರಿ ಆದ ಮೇಲೆ ತುಟ್ಟಿ ಭತ್ತೆ, ಅದು ಇದೂ ಸೇರಿ ನನಗೆ ಬರುವದು ತಿಂಗಳಿಗೆ ೬೭ ರೂ. ಗಳು. ಇದರಲ್ಲಿ ಪ್ರಪಂಚವಾದರೂ ಸಾಗಬೇಕೋ ಬೇಡವೋ? ಮೂಗುಬೊಟ್ಟು ಕಳೆದು ಹೋದದ್ದು ಗೀತಾಗೆ ಗೊತ್ತೇ ಇರಲಿಲ್ಲ. ನಾನು ಹೇಳಿದ ಮೇಲೆಯೇ ಅವಳಿಗೆ ಗೊತ್ತು. ಅಂದು

ಸಾಯಂಕಾಲ ಆಫೀಸಿನಿಂದ ಮನೆಗೆ ಬಂದೆನು. ಗೀತಾ ಬಹಳ ಸಂಭ್ರಮದಿಂದ ನನ್ನೆದುರು ಬಂದು "ಇದನ್ನು ಕೊಂಡು ಕೊಂಡಿದ್ದೆನೆ ಚನ್ನಾಗಿದೆಯೇ ನೋಡಿ" ಎಂದು ಒಂದು ರೇಶಿಮೆಯ ಜರದಂಚಿನ ಖಣವನ್ನು ತೋರಿಸುವದರಲ್ಲಿ ಲೀನಳಾಗಿದ್ದಳು.

ನಾನು ಆವಳ ಮುಖವನ್ನು ನೋಡಿದೆ. ಏನೋ ಬೋಳು ಬೋಳು ಕಾಣಿಸಿತು. ಒಮ್ಮೆಲೆ ಕೇಳಿದೆ. "ಸರಿ-ಆದರೆ ನಿನ್ನ ಮೂಗುಬೊಟ್ಟು ಎಲ್ಲಿ?"

"ಎಲ್ಲಿ ಅಂದ್ರೆ ?" ಗೀತಾ ತನ್ನ ಮೂಗಿಗೆ ಕೈ ಒಯ್ದಳು. "ಅಯ್ಯೋ ಎಲ್ಲಿ ಹೋಯಿತು?" ಎಂದು ಗಾಬರಿಯಾಗಿ ಅಡಿಗೆ ಮನೆಗೆ ಓಡಿದಳು.

ನಾನು ಸೂಟಬೂಟ ತೆಗೆಯುತ್ತಲೇ ಕೂಗಿದೆ. "ಸಿಕ್ತೇನೇ, ಏನೇ! ಎಲ್ಲಿಯಾದರೂ ಕಳೆದು ಹೋಯಿತೇನು? ಅಥವಾ ಎಲ್ಲಿಯಾದರೂ ತೆಗೆದಿಟ್ಟು ಮರೆತಿದ್ದಿಯೋ?........"

"ಅಯ್ಯೋ ಎಲ್ಲಿಯೂ ಬಿಚ್ಚಿ ಇಡಲಿಲ್ಲ......." ಎಂದು ದೊಡ್ಡ ಧ್ವನಿ ತೆಗೆದು ಅಳಹತ್ತಿದಳು.

"ಎಲ್ಲಿಯಾದರೂ ಬಿಚ್ಚಿಟ್ಟಿರಬಹುದು. ನಿಧಾನಿಸಿ ಹುಡುಕು—" ಎಂದು ಉಪಚರಿಸತೊಡಗಿದೆ. "ಇಲ್ಲ ಅಳಹತ್ತಿದರೆ ಮತ್ತೇನು ಮಾಡಲಿ!"

ನಾನು ರಂಬಿಸಿದ ಹಾಗೆಲ್ಲ ಮತ್ತಿಷ್ಟು ಜೋರಾಗಿ ಅಳಹತ್ತಿದಳು. ನಮ್ಮ ಕಂಪೌಂಡಿನಲ್ಲಿಯೇ ನಿಂತುನಿರ್ಮಲೆಯನ್ನು ಕೂಗಿದಳು. "ಏನಮ್ಮಾ ನಿರ್ಮಲಾ ! ನನ್ನ ಮೂಗುಬೊಟ್ಟು ಎಲ್ಲಿಯೋ ಬಿದ್ದು ಬಿಟ್ಟಿತು. ಭಾಂಡೀ ಅಂಗಡಿಗೆ ನಿನ್ನ ಸಂಗಡ ಬಂದಿದ್ದೆನಲ್ಲಾ. ಆಗ ನನ್ನ ಮೂಗಿನಲ್ಲಿ ಮೂಗು ಬೊಟ್ಟು ಇತ್ತೇ ಏನಮ್ಮಾ ?......" ಎಂದಳು.

"ನಾನು ಗಮನಿಸಲಿಲ್ಲ. ಗೀತಾ, ಎಲ್ಲಿ ಹೋಗುತ್ತೆ ! ಮನೆಯಲ್ಲಿ ಹುಡುಕಿ ನೋಡಿದೆಯಾ ? ಎಲ್ಲಿಯೂ ಹೋಗಲಾರದು. ಬನ್ನಿ. ನಾನೂ ಬರುತ್ತೇನೆ. ಹೋಗಿ ನೋಡೋಣ" ಎಂದು ನಿರ್ಮಲಾ ಗೀತಾ ಇಬ್ಬರೂ ಮನೆ ಝಡತಿ ಮಾಡತೊಡಗಿದರು. ಪೆಟ್ಟಿಗೆಯೊಳಗಿನ ಅರಿವೆಗಳನ್ನೆಲ್ಲ ಕಿತ್ತೊಗೆದರು. ಒಂದು ಜಾಗ ಬಿಡದೇ ಎಲ್ಲವನ್ನೂ ಹುಡುಕಿದರು. ಮೂಲೆ

ಮೂಲೆಯನ್ನೂ ಬಿಡದೆ ಮನೆಯಲ್ಲಾ ಕಸಗೂಡಿಸಿ ಕಸದಲ್ಲಿ ಹುಡುಕಿದರು. ಮೂಗುಬೊಟ್ಟು ಸಿಗಲಿಲ್ಲ.

— ಮೂನ್ನೂರಾ ವಿಪ್ಪತ್ತು ರೂಪಾಯಿಗಳು ಹೋದವಲ್ಲಾ ಎಂದು ಒಂದು ಸಂಕಟ. ಇವಳಿಗೆ ಆದ ಪ್ರಾಯಶ್ಚಿತ್ತ ಯೋಗ್ಯವದೆ ಎಂಬ ಕೋಪ ನನ್ನ ಎದೆಯನ್ನು ಸುಡುತ್ತಿದ್ದವು.

—ಎಲ್ಲಿಯೋ ಬಿದ್ದು ಹೋಗಿದೆ! ಏನುಮಾಡಲಮ್ಮಾ! ಏನು ಮಾಡಲಿ ಅದನ್ನು ಇನ್ನು ಹೇಗೆ ಕಂಡೇನು?" ಎಂದು ಅಳುತ್ತ ಗೀತಾ ನನ್ನಲ್ಲಿಗೆಬಂದಳು.

ಅವಳನ್ನು ಕಾಣುತ್ತಲೂ ನನ್ನ ಕೋಪ ಮಾಯವಾಯಿತು. ಕರುಣ ದೋರಿತು

—ಎಲ್ಲಾ ಚನ್ನಾಗಿ ಹುಡುಕಿದೆಯಾ? ಎಂದನು.

— ನೋಡಿದೆ. ಎಲ್ಲಿಯೂ ಇಲ್ಲ. ಹೊರಗೇ ಬಿದ್ದಿರಬೇಕು '' ಎಂದು ಹಲುಬಿದಳು.

'' ಇವತ್ತು ಮನೆ ಬಿಟ್ಟು ಎಲ್ಲೆಲ್ಲಿ ಹೋಗಿದ್ದಿ ಜ್ಞಾಪಿಸಿಕೋ ! ?

'' ಎಲ್ಲಿಯೂ ಇಲ್ಲ. ಭಾಂಡೀ ಅಂಗಡಿಗೆ. ಮತ್ತು ಜವಳೀ ಅಂಗಡಿಗೆ ಹೋಗಿ ಈ ಖಣವನ್ನು ತಂದೆ. ನಿರ್ಮಲಾ ಕರೆದಳು. ನಾನು ಹೋದೆ· ದೇವರೇ! ಈ ದಿನ ಪೇಟೆಗೆ ಹೋಗಲು ನನಗೆ ದುರ್ಬುದ್ಧಿ ಏಕೆ ಬಂದಿತು ? ಎಂದು ಅತ್ತಳು.

ನನ್ನ ಮನಸ್ಸು ಕರಗಿತು. ನನಗೂ ತುಸು ದುಃಖವಾಯಿತು. ಇರಲಿ ಬಿಡು ಹೋದರೆ ಹೋಗಲಿ, ನಿನ್ನ ಲಭ್ಯದಲ್ಲಿ ಅದು ಇಲ್ಲ ಎಂದು ಕೋ.... ಹಸಿವಾಗಿದೆ ಅಡಿಗೆ ಏನು" ಎಂದು ವಿಷಯ ಬದಲಿಸಿದೆನು.

ಏನೋ ಮಾಡಿದ್ದೇನೆ.........ಗೀತಾ ಕಣ್ಣೊರಿಸಿಕೊಂಡಳು. ನಿಮಗೆ ಪಿತ್ತವಾಗಿದೆಯಂದಿದ್ದಿರಲ್ಲಾ ಅದಕ್ಕಾಗಿ ಬೇವಿನ ಹೂವಿನ ಸಾರು ಮಾಡಿ ಹಪ್ಪಳ ಸುಟ್ಟಿದ್ದೇನೆ—ಎಂದಳು. ಇದು ಹೋದ ದೀಪಾವಳೀ ಪ್ರಕರಣ.

ಮೂಗುಬೊಟ್ಟಿಲ್ಲದೇ ಮುತ್ತೈದೆಯರಿರುವದಾಗದೆಂದು ೫ ರೂಪಾಯಿ ಯ ರಂಗೂನ ಡಾಯಮಂಡದ ಒಂದು ಮೂಗುಬಟ್ಟನ್ನು ತಂದುಕೊಟ್ಟೆನು. ಅದನ್ನೇ ಭಾಗ್ಯವೆಂದು ಗೀತಾ ಸ್ವೀಕರಿಸಿದ್ದಾಳೆ.

ಮೂಗುಬೊಟ್ಟು ಕಳೆದುಕೊಂಡ ವಿಷಯವನ್ನು ಗೀತಾ ತನ್ನ ತಂದೆಗೆ ಬರೆದುಕೊಂಡಳು. ಅದನ್ನು ಅವರು ನಂಬಲೇ ಇಲ್ಲವಂತೆ.— ಇಬ್ಬರೂ ಸೇರಿ ಕೊಂಡು ಅದನ್ನು ಮಾರಿ ತಮಾಶೆ ಮಾಡಿರಬೇಕೆಂದೂ ನನಗೆ ಈ ರೀತಿ ಬರೆದು ನನ್ನನ್ನು ಸಮಾಧಾನ ಪಡಿಸಿದರೆಂದೂ ಅಂದುಕೊಂಡರಂತೆ. ಇದನ್ನು ಅಲ್ಲಿಂದ ಬಂದವರು ನನಗೆ ಹೇಳಿದರು. ನನ್ನ ತಂದೆಯೂ ನಂಬಲಿಲ್ಲ. “ ಶಿರಿವಂತರ ಮಗಳನ್ನು ಕಟ್ಟಿಕೊಂಡು ಪೋಕಿಸೋದಿದ್ದರೆ ದಿನವೂ ಒಂದೊಂದು ಮಾರಬೇಕಾಗುವದು. ಅವನ ಪ್ರಾರಭ್ಧ. ಎಂದು ತಂದೆಯವರು ಅಂದರೆಂಬ ಸುದ್ದಿಯೂ ಬಂದಿತು. “ಬಡವರ ವಿಷಯವೇ ಹೀಗೆ ಎಂದು ನಿಟ್ಟುಸುರುಬಿಟ್ಟು ಸುಮ್ಮನಾದೆನು;

ಗೀತಾ ಈ ವಿಷಯವನ್ನು ಮರೆತಳೋ ಮನದಲ್ಲಿಟ್ಟುಕೊಂಡಳೋ ನನಗೆ ಗೊತ್ತಿಲ್ಲ. ಆದರೂ ಈ ವಿಷಯ ನನ್ನ ಹೃದಯವನ್ನು ಯಾವಾಗಲೂ ಸುಡುತ್ತಿತ್ತು. ಮೂಗುಬೊಟ್ಟು ಕಳೆದಿದೆಯಂದರೆ ಯಾವನೂ ನಂಬಲಿಲ್ಲ; ತಂದೆಯೂ ನಂಬಲಿಲ್ಲ. ಬೇಕಾದಷ್ಟು ಕಷ್ಟವಾಗಲಿ. ಒಂದು ಅಷ್ಟೇ ಬೆಲೆ ಬಾಳುವ ಮೂಗುಬೊಟ್ಟನ್ನು ದೊರಕಿಸಬೇಕೆಂದು ನಿಶ್ಚಯಿಸಿದೆನು. ಅದ ಕ್ಕಾಗಿ ಒಬ್ಬ ಹಣವಂತರ ಮಗನಿಗೆ ಓದು ಹೇಳುವದನ್ನು ಗೊತ್ತು ಮಾಡಿಕೊಂಡೆನು. ಹುಡುಗ ಇಂಟರ ಕ್ಲಾಸಿನಲ್ಲಿದ್ದನು. ಬುದ್ಧಿ ತುಸು ಮಂದ. ತಿಂಗಳವೇತನವೇನೂ ಬೇಡವೆಂದೂ ವರ್ಷದ ಕೊನೆಗೆ ಒಮ್ಮೆಲೆ ನನಗೆ ನಾಲ್ಕುನೂರು ರೂಪಾಯಿಗಳನ್ನು ಕೊಡಬೇಕೆಂದೂ ಗೊತ್ತು ಮಾಡಿ ಕೊಂಡೆನು. ಹುಡುಗನು ಸಪ್ಟಂಬರ ತಿಂಗಳ ಪರೀಕ್ಷೆಗೆ ಕುಳಿತನು. ನವ ದೀಪಾವಳೀ ಹಬ್ಬದ ಕೆಲದಿನ ಮುಂಚೆ ಪರೀಕ್ಷೆಯ ಪರಿಣಾಮ ತಿಳಿಯಿತು. ನನ್ನ ವಿದ್ಯಾರ್ಥಿ ಪಾಸಾದನು: ಕೈಯಲ್ಲಿ ನಾಲ್ಕುನೂರು ರೂಪಾಯಿಗಳ ಚೆಕ್ಕು ಬಂದಿತು.

ಆದಿನ ಸಂಜೆಗೆ ಆ ಚೆಕ್ಕನ್ನು ಕೋಟಿನ ಕಿಸಿಯಲ್ಲಿ ಭದ್ರವಾಗಿಟ್ಟು ಕೊಂಡು ಮನೆಯ ದಾರೀ ಹಿಡಿದೆನು. ಗೀತಾಗೆ ಅಂತಹದೇ ಒಂದು ವಜ್ರದ ಮೂಗುಬೊಟ್ಟನ್ನು ಅಷ್ಟೇ ಕಿಮ್ಮತ್ತಿನಲ್ಲಿ ತಂದು ಕೊಡಬೇಕೆಂಬ ವಿಚಾರದಲ್ಲಿಯೇ ಮನೆಗೆ ಬಂದೆನು.

"ಏನು ಈ ದಿನ ಇಷ್ಟು ಹೊತ್ತು ?" ಎಂದು ಸಂಭ್ರಮದಿಂದ ಗೀತಾ ನನ್ನೆದುರು ಬಂತುನಿಂತಳು. ಏನೋ ದುಶ್ಚಿನಃ ಕಟ್ಟಿಟ್ಟದೆಯೆಂದು ಮೋರೆ ಮುದುರಿಸಿಕೊಂಡು ತೆಳಗೆ ಮಾಡಿದೆ. "ತುಸು ಕೆಲಸವಿತ್ತು" ಅಂದೆನು.

"ಇಲ್ಲಿ ನೋಡೀ....ಹೀಗೇಕೆ ಕೆಳಗೆಮುಖ ಹಾಕಿದ್ದೀರಿ ನನ್ನ ಕಡೆನೋಡಿ"

"ಹೇಳು, ಏನು?"

"ನನ್ನ ಕಡೆ ನೋಡಿ."

ಯಾವ ವಿಪತ್ತು ಬಂದರೂ ಎದುರಿಸಲೇ ಬೇಕಲ್ಲವೇ ಎಂದು ಧೈರ್ಯ ತಂದು ಮುಖ ಮೇಲೆಮಾಡಿದೆ. ಗೀತಾಳನ್ನು ನೋಡಿದೆ. ಆಶ್ಚರ್ಯ, ಪರಮಾಶ್ಚರ್ಯ, ಅವಳ ಮೂಗಿನಲ್ಲಿ ಮೂಗುಬೊಟ್ಟಿದೆ. ಅವಳು ಸಂತೋಷ ದಿಂದ ನಗುತ್ತಿದ್ದಾಳೆ. ನನಗೂ ಹರ್ಷವಾಯಿತು. ಆದರೆ ಅದು ಇದೇ ಹೇ ಗೋ ಎನ್ನುತ್ತ ಅದರ ಮೇಲೆ ಬೆರಳನ್ನಾಡಿಸಿದೆ.

"ಏನಿದು ಗೀತಾ ?"

"ಏನಂದರೇನು? ಇದು ಮೂಗುಬೊಟ್ಟು. ಕಳೆದು ಹೋದ ಮೂಗ್ಬೊಟ್ಟು. ಹೋದ ದೀಪಾವಳಿಯಲ್ಲಿ ಕಳೆದದ್ದು.......

"ಈಗೆಲ್ಲಿ ಸಿಕ್ಕಿತು ?"

"ಹೋದ ವರುಷ ದೀಪಾವಳಿಗೆ ಹಿಂದಿನ ದಿನ ನಿಮಗೆ ಪಿತ್ತವಾಗಿ ತ್ತೆಂದು ಬೇವಿನ ಹೂವಿನ ಸಾರು ಮಾಡಿದ್ದೆ. ಜ್ಞಾಪಕವಿದೆಯೇ, ಆ ಹೂ ತೆಗೆಯುವಾಗ ಡಬ್ಬಿಯಲ್ಲಿ ಇಣಿಕಿ ನೋಡಿದೆ. ಮೂಗುಬೊಟ್ಟು ಯಾವ ಮಾಯೆಯಿಂದ ಅದರಲ್ಲಿ ಬಿತ್ತೋ ದೇವರೇ ಬಲ್ಲ. ಆ ಡಬ್ಬಿ ಹಾಗೆಯೇ ಇಟ್ಟುಬಿಟ್ಟದ್ದೆ. ಈ ದಿನ ಮಧ್ಯಾಹ್ನ ಗೋಡಂಬಿ ಹಾಕುವದಕ್ಕೆ ಖಾಲೀ ಡಬ್ಬಿಗಳಿರಲಿಲ್ಲ, ಆ ಡಬ್ಬಿಯನ್ನು ತೆರವು ಮಾಡಿದೆ. ಆದರಲ್ಲಿತ್ತು........

ಎಂದು ಸಂತೋಷದಿಂದ ಮನಃಪೂರ್ವಕವಾಗಿ ನಗತೊಡಗಿದಳು, ನಾನೂ ನಗಹತ್ತಿದೆನು. "ಇಂದು ಸುಖದ ದಿನ ಗೀತಾ" ಎಂದೆನು.

"ಈ ಐದು ರೂಪಾಯಿಯ ಮೂಗುಬೊಟ್ಟಿನ ಕಾಲ್ಗುಣದಿಂದ ಕಳೆದು ಹೋದ ವಜ್ರದ ಮೂಗುಬೊಟ್ಟು ಸಿಕ್ಕಿತು. ಯಾವುದನ್ನು ಧರಿಸಲಿ?"

"ನಾನೇನು ಹೇಳಲಿ ನಿನಗೆ ಯಾವದು ಇಷ್ಟವೋ..."

"ನೀವು ಹೇಳಿರಿ"

"ನೀನು ಯಾವುದನ್ನು ಧರಿಸಿದರೂ ನನಗೆ ಚಂದವಾಗಿಯೇ ಕಾಣುವಿ ಇರಲಿ, ಇಲ್ಲಿ ತುಸು ಬಾ. ಇನ್ನೂ ಬಾ........

"ಯಾಕೆ, ಹೇಳಿ, ಏನದು ಕೈಯಲ್ಲಿ ಹಿಡಿದದ್ದು?"

ಚೆಕ್ಕನ್ನು ಅವಳ ಕೈಯಲ್ಲಿ ಕೊಟ್ಟೆನು. ನಾಲ್ಕುನೂರು ರೂಪಾಯಿಗಳು ಬರುವವೆಂದು ಹೇಳಿದೆನು. ಗೀತಾ ಸಣ್ಣ ಹುಡುಗಿಯಂತೆ ಜಿಗಿದಾಡಿದಳು.

"ಹೇಗೂ ನನ್ನ ನಿಮ್ಮ ತಂಗಿಗಳು "ಷೋಕೀ ಮಾಡುವರು" ಎಂದು ನಮ್ಮನ್ನು ಟೀಕಿಸುವರು. ಈ ದೀಪಾವಳಿಯಲ್ಲಿ ಷೋಕಿ ಆಗಿಹೋಗಲಿ" ಎನ್ನುತ್ತ ಒಂದೇ ಏಟಿಗೆ ಅಡಗಿಯ ಮನೆಗೆ ಓಡಿದಳು. ಏನೋ ಹಾಡನ್ನು ಗುಣುಗುಟ್ಟುತ್ತ ತಾಟುಮಣೆಗಳನ್ನು ಇಡತೊಡಗಿದಳು.

## ರೇಶನ್ನ

ದುರ್ಗದಕಟ್ಟೆ ಎಂಬ ಹಳ್ಳಿಯನ್ನು "ಹಳ್ಳಿ" ಎನ್ನಲು ಕೂಡ ಸಾಧ್ಯವಿಲ್ಲದಷ್ಟು ಚಿಕ್ಕದು. ಅಲ್ಲಲ್ಲಿ ನಾಲ್ಕಾರು ಗುಡಿಸಲುಗಳು ಮಾತ್ರ ವಿಶಾಲವಾದ ಬೈಲಲ್ಲಿ ಗೋಚರಿಸುವವು. ಬೈಲಿಗೆ ಬೈಲೇ ಆಕಾಶದ ಪ್ರತಿ ಛಾಯೆಯೋ ಎನ್ನುವಂತೆ ವಿಶಾಲವಾಗಿದೆ. ಅಷ್ಟು ಜನವಿಲ್ಲದ ಹಳ್ಳಿ ಅದು. ಈ ಹಳ್ಳಿಗೆ ಒಂದು ಕೆರೆಯೂ ಇದೆ. "ಮಳೆ ಆದರೆ ಕೆರೆ ತುಂಬೇ ತುಂಬುವದು" ಎನ್ನುವರು ಈ ಹಳ್ಳಿಯ ಜನರು. ಆದರೆ ಆ ಕೆರೆ ತುಂಬಿದ್ದು ಹಳ್ಳಿಯ ಒಬ್ಬ ಹಳ್ಳಿಗನೂ ನೋಡಿಲ್ಲ. ಇಲ್ಲಿಯ ಭೂಮಿಯೂ ಫಲವತ್ತಾದದ್ದು. ಒಂದು ವರ್ಷ ಮಳೆ ಬಂದರೆ ಸಾಕು. ಹತ್ತು ವರುಷ ಸಾಕಾಗುವಷ್ಟು ಬೆಳೆ

ಬರುವದಂತೆ. ಸರಿ. ಅಂತೂ ಈ ಹಳ್ಳಿವಾಸಿಗಳಿಗೆ ಕುಡಿಯಲು ನೀರೂ ಇಲ್ಲ; ತಿನ್ನಲು ಕೂಳೂ ಇಲ್ಲ.

ಈ ಹಳ್ಳಿಯವರಿಗೆ ಇನ್ನೊಂದು ಹೆಚ್ಚಿನ ಸಮಾಧಾನ; ತಮ್ಮಂತೆ ಎಲ್ಲ ಹಳ್ಳಿಯಲ್ಲಿಯೂ ಅತಿವೃಷ್ಟಿಯಿಂದಾಗಲೀ ಬೆಳೆ ಇಲ್ಲದೇ ಬಾಯ್ಬಿಡುವವರು ಇದ್ದಾರೆ ಎಂಬುದು. ಸರಕಾರವು ಕಾಳು ಹಂಚುವ ವ್ಯವಸ್ಥೆ ಕೈಕೊಂಡು, ಎಲ್ಲರಿಗೂ ಒಂದೇ ತುತ್ತಾದರೂ ಆಗಲೊಲ್ಲವೇಕೆ ಆಹಾರ ಕೊಡುತ್ತಿರುವದು, ಎಂಬುದು ಇನ್ನೊಂದು ಸಮಾಧಾನ. ಹೀಗೆ ಸಮಾಧಾನ ಹೊಂದ್ದವರಲ್ಲಿ ತಿಮ್ಮನೂ ಒಬ್ಬ. ಆದರೆ ಅವನಿಗೂ ಈಗ ಹೇಳತೀರದಷ್ಟು ಕಷ್ಟ. ಗಂಡಸತ್ತ ಹಿರಿಯ ಮಗಳು ಮನೆಗೆ ಬಂದುಬಿಟ್ಟಳು. ಮುಪ್ಪಿನಲ್ಲಿ ಸಂಸಾರ ಭಾರ ಹೊರುವನೆಂದು ನಂಬಿದ ಹಿರಿಯ ಮಗ ಇಪ್ಪತ್ತೈದು ವರುಷದವನು ಯಾರ ಹತ್ತಿರವೂ ಹೇಳದೇ ಕೇಳದೇ ಯುದ್ಧಕ್ಕೆ ಸೇರಬಿಟ್ಟನು. ಅವನ ಹೇಳಿಕೆಯ ಪ್ರಕಾರವೋ ಏನೋ ಸರಕಾರದಿಂದ ತುಸ ಕಾಲ ತಿಂಗಳಿಗೆ ೧೦ ರೂ. ಗಳಂತೆ ತಿಮ್ಮನಿಗೆ ಬರುತ್ತಿತ್ತು. ಈಗ ಅದೂ ನಿಂತು ಹೋಯಿತು. ಮುಪ್ಪಿನಿಂದ ಜೀರ್ಣರಾದ ತಿಮ್ಮ ಅವನ ಹೆಂಡತಿ ಕೆಲಸಕ್ಕೆ ಹಿಂಜರಿಯುವವರಲ್ಲ. ಆದರೆ ಅವರಿಗೆ ಗೊತ್ತಿದ್ದುದು ಒಂದೇ ಕೆಲಸ, ಹೊಲದಲ್ಲಿ ದುಡಿಯುವದು. ಈ ಸಲ ಮಳೆಯೇ ಇಲ್ಲದ್ದರಿಂದ ಅದೂ ನಿಂತುಹೋಗಿದೆ. ಅಂತೂ ಈ ಸಂಸಾರ ಸಾಗುತ್ತಿದ್ದುದ್ದು, ಅವರ ಕೊನೆಯಮಗ ನಾಗನಿಂದಲೇ.

ನಾಗನಿಗೆ ಸುಮಾರು ಹದಿನೆಂಟು ವಯಸ್ಸು; ತೆಳ್ಳಗೆಗಿದ್ದು ಉದ್ದ ಬೆಳೆದಿದ್ದಾನೆ. ದುಡಿತಕ್ಕೆ ತಕ್ಕ ಆಹಾರವಿಲ್ಲದ್ದರಿಂದ ಮೈಯೊಳಗಿನ ಎಲುಬುಗಳು ಕಾಣುವವು. ಒಳ್ಳೆಯ ಹುಡುಗ, ತಾಯಿತಂದೆಯರನ್ನು ಆದರದಿಂದ ಕಾಣುವನು. ದುರ್ಭಾಗ್ಯಳಾದ ಅಕ್ಕನನ್ನು ಪ್ರೀತಿಸುವನು. ಯುದ್ಧ ಕಾಲದಲ್ಲಿ ಅವನಿಗೆ ಕೂಲಿಕುಂಬಳಿ ದೊರೆಯುತ್ತಿತ್ತು. ಆದರೆ ಯುದ್ಧ ನಿಂತಾಗಿನಿಂದ ಅವನಿಗೆ ಕೆಲಸವೇ ಇಲ್ಲದಾಗಿದೆ. ಮೇಲಾಗಿ ಜೀವನಕ್ಕೆ ಅಶ್ಯವಶ್ಯಕಯೆನಿಸುವ ಸಾಮಾನುಗಳ ಬೆಲೆ ದಿನದಿನವೂ ಏರತೊಡಗಿವೆ. ಹೀಗಾಗಿ ಜೀವನ ಸಾಗಿಸುವದೇ ಅಸಾಧ್ಯವಾಗಿಬಿಟ್ಟಿತು. ಈ ನಾಲ್ಕು ತಿಂಗಳಿನಿಂದ ರೇಶನ್ನ ಸಹ ಕಡಿಮೆ ಮಾಡಿಬಿಟ್ಟಿದ್ದಾರೆ ಸರಕಾರದವರು.

ರೇಶನ್ನ ಕಾಳು ತರಲು ನಾಗನು ನೆರೆಊರಿಗೆ ಹೋಗಬೇಕು. ದಾಸೇನಪುರವು ದುರ್ಗದಕಟ್ಟೆಗೆ ಎರಡು ಮೈಲು ದೂರವಿರುವ ಊರು. ಸುಮಾರು ಐದಾರುನೂರು ಮನೆಗಳಿವೆ. ಒಂದು ಶಾಲೆ ಅಂಚೇಕಚೇರಿ. ಪೋಲೀಸ ಠಾಣೆ. ಮೇಲೆ ಒಂದು ರೇಶನ್ನ ಅಂಗಡಿಯೂ ಇದೆ. ಇಲ್ಲಿಂದಲೇ ನಾಗನು ರೇಶನ್ನು ಒಯ್ಯುವನು. ಈ ರೇಶನ್ನ ಪದ್ಧತಿಯಿಂದ ಬಡವರ ಕಲ್ಯಾಣವಾಗಿದೆಯೆಂದು ಜನರನ್ನುವದು ನಾಗನಿಗೇಕೋ ಸರಿ ಕಾಣಲೊಲ್ಲದು. ಹಣೆಯಿಂದ ಬೆವರು ಸುರಿಸಿ ಹಗಲುರಾತ್ರಿ ದುಡಿಯುವವರಿಗೆ ಈ ರೇಶನ್ನದ ಚಟಾಕು, ಅರ್ಧ ಚಟಾಕಿನ ಕಾಳು ಹೇಗೆ ಸಾಕಾಗಬೇಕು! ಎಂಬುದು ಅವನ ವಾದ. ತನ್ನ ಹಿರಿಯರು ದಿನವೂ ಅರೆಹೊಟ್ಟೆ ಉಂಡು ಕೃಶರಾಗುತ್ತಿರುವದನ್ನು ನೆನೆದು ಬಹಳ ವ್ಯಸನಪಟ್ಟನು.

ಒಂದು ದಿನ ಸಾಯಂಕಾಲ ಆರು ಗಂಟೆಯಾಗಿರಬಹುದು. ಎಲ್ಲಿಯೋ ಅಲೆದಾಡಿ ಒಂದು ಪಿರಂಗಿ ಹಣ್ಣನ್ನು ಹುಡುಕಿ ತಂದನು. ಅಂದು ರಾತ್ರಿ ಮನೆಯವರಿಗೆಲ್ಲ ಅದೇ ಊಟವಾಗಿತು. ನಾಗನು ಮತ್ತೆ ಹೊರಗೆ ಹೋಗಿ ತಿರುಗಾಡಿ ಬಂದನು. ಅಕ್ಕನು ಕೇಳಿದಳು "ತಮ್ಮಾ ಹೋದ ಕೆಲಸ ಆಯಿತೇ?"

"ಇಲ್ಲ. ಹಣವನ್ನಾದರೂ ವಾಪಸು ಕೊಡುತ್ತಾರಂತೆ 'ಅಕ್ಕಿಯನ್ನಾಗಲೀ ರಾಗಿಯನ್ನಾಗಲೀ ಕಣ್ಣಿಗೆ ಸಹ ಹಾಕುವದಿಲ್ಲ' ಎಂದರು. ಕೊಡಲು ಇಷ್ಟವಿದ್ದರೂ ಕೊಡಲು ಭಯಪಡುತ್ತಾರೆ. ನನ್ನ ಪರಿಚಯಸ್ಥರೊಬ್ಬರು ರಾತ್ರಿ ಬಂದರೆ ಅಕ್ಕಿ ಕೊಡುತ್ತೇವೆಂದು ಹೇಳಿದ್ದಾರೆ. ಒಂದು ಚೀಲ ಒಯ್ಯುವೆನು. ಆದರೆ ಈ ಮಾತನ್ನು ತಾಯಿತಂದೆಗಳಿಗೆ ತಿಳಿಸಬೇಡ ಎಲ್ಲಿ ಹೋಗಿರುವನೆಂದು ಕೇಳಿದರೆ 'ಇಲ್ಲಿಯೇ ಹೋಗಿದ್ದಾನೆ ಈಗ ಬರಬಹುದು' ಎಂದು ಹೇಳು. ಒಂದು ಪಿರಂಗಿಯ ಹಣ್ಣನ್ನು ತಂದು ಇಟ್ಟಿದ್ದೇನೆ. ಅದನ್ನು ತಿಂದು ಮಲಗಿರಿ" ಎಂದು ಹೇಳುವಾಗ ಅವನ ಧ್ವನಿ ಬದಲಾಯ್ತು. ಗಂಟಲಲ್ಲಿ ಏನೋ ಸಿಕ್ಕಂತಾಗಿ ಬಿಟ್ಟಿತು.

"ತುಂಬಾ ಹೊತ್ತು ಮಾಡಬೇಡಪ್ಪಾ, ಬೇಸಿಗೆಯ ಕಾಲ, ಹುಳಹುಪ್ಪಡಿ ಕೈಯಲ್ಲೊಂದು ದೊಣ್ಣೆ ತೆಗೆದುಕೊಂಡು ಹೋಗು" ಎಂದಳು.

ನಾಗನು ಮೂಲೆಯಲ್ಲಿಯ ದೊಣ್ಣೆಯನ್ನು ಹೆಗಲ ಮೇಲಿರಿಸಿ ಬಾಗಿಲನ್ನು ಇಕ್ಕಿಕೊಳ್ಳಲು ಅಕ್ಕನಿಗೆ ಹೇಳಿ ದಾರೀ ಹಿಡಿದನು.

ಸೂರ್ಯನು ಮುಳುಗಿಬಿಟ್ಟಿದ್ದನು. ನಾಗನು ಭರದಿಂದ ಸಾಗಿದನು ದಾರಿಯಲ್ಲಿ ಒಂದು ಮಡುವು ಹತ್ತಿತು. ತುಸು ವಿಶ್ರಮಿಸಬೇಕೆಂದು ಮಡುವಿನಲ್ಲಿ ಕೈಕಾಲುಗಳನ್ನು ತೊಳೆದುಕೊಂಡು ತುಸು ನೀರು ಕುಡಿದನು ಮೆಲ್ಲನೆ ತಂಗಾಳಿಯೊಂದು ಸುಳಿಯಿತು. ಹಾಗೆಯೇ ಪಾವಟಿಗೆಗಳ ಮೇಲೆ ಕುಳಿತುಕೊಂಡನು. ಮನೆತನದ ಒಂದೊಂದೇ ವಿಷಯಗಳು ಅವನಿಗೆ ನೆನಪಾಗತೊಡಗಿದವು. ಒಂದೂ ಸುಖದ ಸನ್ನಿವೇಶಗಳಿಲ್ಲ ಎಲ್ಲವೂ ದುಃಖದವೇ. ಇವೆಲ್ಲವನ್ನು ಸಹಿಸಬಹುದು. ಆದರೆ ಇಂದು ಹೊಟ್ಟೆತುಂಬ ಕೂಳಿಲ್ಲದೇ ಇರುವದು ಹೇಗೆಸಾಧ್ಯ. ದೇವರಿಗೆ ಕಣ್ಣಿಲ್ಲವೇ? ಕುಳಿತ ನಾಗನು ಎದ್ದುನಿಂತನು. ಅತ್ತಿಂದಿತ್ತ ಇತ್ತಿಂದತ್ತ ಓಡಾಡಹತ್ತಿದನು. ಯೋಚಿಸಿಯೇ ಯೋಚಿಸಿದನು. "ಪೂರ್ವದಲ್ಲಿ ಉದಯಿಸುವ ಸೂರ್ಯನು ಪಶ್ಚಿಮಕ್ಕೆ ಹುಟ್ಟಿದರೂ ಸರಿಯೇ ಬೆಳಗಾಗುವದರೊಳಗಾಗಿ ಅಕ್ಕಿಯನ್ನು ಮನೆಗೆ ಸಾಗಿಸಿಯೇ ತೀರಬೇಕು." ಎಂದು ನಿಶ್ಚಯಿಸಿದನು. ರಾತ್ರಿ ಒಬ್ಬ ಸ್ನೇಹಿತನು ತನಗೆ ಅಕ್ಕಿಯನ್ನು ಕೊಡುವದಾಗಿ ಹೇಳಿದ ಸುಳ್ಳುಮಾತು ನೆನಪಿಗೆ ಬಂದು ನಾಗ ನಕ್ಕನು. ತನ್ನ ಮಾತನ್ನು ಏನೂ ಅರಿಯದ ತನ್ನ ಅಕ್ಕನನ್ನು ನಂಬುವಂತೆ ಮಾಡಿದ್ದಕ್ಕೆ ದುಃಖವೂ ಆಯಿತು.

ಕುಳಿತನು, ಎದ್ದನು, ಓಡಿದನು, ಏನು ಮಾಡಿದರೂ ಯೋಚನೆ ಬಗೆಹರಿಯಲಿಲ್ಲ. ಹೊತ್ತು ಓಡಾಡುತ್ತಿದ್ದುದೂ ಗೊತ್ತಾಗಲಿಲ್ಲ. ಪೂರ್ವ ದಿಕ್ಕಿಗೆ ಚಂದ್ರೋದಯವಾಗುವ ಚಿನ್ಹಗಳು ತೋರಿದವು. "ಸರಿ ಬೆಳದಿಂಗಳು ಬಂದ ಮೇಲೆ ಅಡ್ಡದಾರೀ ಹಿಡಿದು ಬೀದಿಗೆ ಹತ್ತ,ತಕ್ಕದ್ದು" ಎಂದು ಅಂದುಕೊಂಡು ತಾನು ಮುಂದೆ ಕೈಕೊಳ್ಳಬೇಕೆಂದಿರುವ ಕಾರ್ಯದ ಯೋಜನೆಯಲ್ಲಿ ಲೀನನಾದನು.

ನಾಗನಿಗೆ ಈಗ ದುಡ್ಡು ಬೇಡ. ಶಿರಿವಂತಿಕೆ ಬೇಡ ಸುಖದ ಸಾಧನೆಗಳಾವಕಡೆಗೂ ಅವನ ಲಕ್ಷವಿಲ್ಲ. ಅವನಿಗೆ ಬೇಕಾದದು ಅಕ್ಕಿ ಮೊದಲಾದ ಕಾಳುಕಡಿ. ಅದು ಸಿಕ್ಕರೆ ದಾಸನಪುರದ ರೇಶನ್ನದಂಗಡಿಯಲ್ಲಿಯೇ ಸಿಗ

ಬೇಕು. ನಿಜವಾಗಿ ನೋಡಿದರೆ ರೇಶನ್ನ ಅಂಗಡಿಯ ಒಡೆಯರೇ ಸುಖಿಗಳು ಬೇಕಾದಷ್ಟು ತಿನ್ನಲಿಕ್ಕೆ ಇರುವದು. ದಾಸನಪುರದ ರೇಶನ್ ಅಂಗಡಿಯವನು ಅಂಥ ಸುಖಿಗಳಲ್ಲಿ ಒಬ್ಬನು. ಅಂಗಡಿ, ಮನೆ ಬೇರೆ ಇಲ್ಲ. ಅವನಿಗೆ ಮನೆಯಲ್ಲಿಯೇ ಅಂಗಡಿಯಿದೆ. ಯಾವಾಗಲೂ ಹೆಂಡತಿಮಕ್ಕಳನ್ನು ಸುತ್ತಲೂ ಇಟ್ಟುಕೊಂಡೇ ಇರುವನು. ಇವನ ಪರಿಚಯ ನಾಗನಿಗೆ ಸಾಕಷ್ಟಿದೆ. ಮೊನ್ನೆ ಅವರಮನೆಗೆಂದು ಕಟ್ಟಿಗೆ ಒಡೆದು ಹಾಕಿದ್ದಾನೆ. ಮನೆಯ ಪರಿಚಯ ವೂ ಇದೆ. ಹಳ್ಳಿಯಿಂದ ಕಾಯಿಪಲ್ಯೆ ತಂದು ಕೊಟ್ಟಿದ್ದಾನೆ. ಮನೆಯ ಯಜಮಾನಿಯ ಪರಿಚಯವೂ ಇದೆ. ಆವಳು ಈಗ ತುಂಬಾ ಗರ್ಭಿಣೆಯಿದ್ದಾಳೆ ಆ ಮನೆಯಲ್ಲಿ ಒಂದೆರಡು ಸಲ ಓಡಾಡಿರುವದರಿಂದ ಆ ಮನೆಯ ಸ್ಥಳಗಳ ಪರಿಚಯವೂ ಪೂರ್ಣವಾಗಿದೆ ಅಕ್ಕಿ, ಜೋಳ, ರಾಗಿಗಳ ಚೀಲಗಳನ್ನಿಟ್ಟ ಸ್ಥಳ ನಾಗನಿಗೆ ಗೊತ್ತಿದೆ.

ಈ ಚೀಲಗಳಲ್ಲಿ ತುಸುತಸು ತೆಗೆದುಕೊಂಡು ಹೋದರೆ ಒಡೆಯನಿಗೇನು ಗೊತ್ತಾಗುವದು ! ಆದರೆ ಅದು ಕಳವಲ್ಲವೇ ? ಅದೇಕೆ ಕಳುವಾಗುವದು ? ನಾಗನು ಕಳುವು ಮಾಡಬೇಕೆಂಬು ದುರುದ್ದೇಶದಿಂದ ಕಾಳುಗಳನ್ನು ಒಯ್ಯುವದಿಲ್ಲ. ತನಗೆ ಹೊಟ್ಟೆಗೆ ಈಗ ಕೊಡುವ ಕಾಳು ಸಾಲುವದಿಲ್ಲವೆಂದು ಒಯ್ಯುವನು. ಹೆಚ್ಚು ಕಾಳನ್ನು ಕಳ್ಳಪೇಟೆಯ ದರದಿಂದ ಕೊಳ್ಳಲು ತನ್ನಲ್ಲಿರುವ ದುಡ್ಡು ಸಾಲದೆಂದು ಕಾಳನ್ನು ಯಾರಿಗೂ ತಿಳಿಯದಂತೆ ಎಷ್ಟು ಬೇಕೋ ಅಷ್ಟೇ ಒಯ್ಯುತ್ತಾನೆ. ಇದು 'ಕಳವು' ಎಂದೆನಿಸಿಕೊಂಡೀತೇ! ಛೇ, ಎಂದಿಗೂ ಅಲ್ಲ. ಆದರೂ ನಾಗನ ಮನವು ಏಕೋ ಬೆದರತೊಡಗಿತು. ಬೆದರಿದರೆ ಉಪವಾಸದಿಂದ ಸಾಯಬೇಕಾಗುವದು, ಹಸಿದವರಿಗೆ ಅನ್ನ ದೊರಕಿಸಿಕೊಟ್ಟರೆ ಕಳವು ಮಾಡಿದಂತಾಗುವದೇ ಎಂದು ಇನ್ನೊಮ್ಮೆ ತರ್ಕ ಹೂಡಿದನು.

ನಾಗನು ಸುತ್ತಲೂ ನೋಡಿದನು. ಶಾಂತವಾದ ಬೆಳದಿಂಗಳ ರಾತ್ರಿ. ಎಲ್ಲಿಯೂ ಸದ್ದು ಕೇಳದು. ನಾಗನ ಕಾಲು ಏಕೋ ಏಳಲೊಲ್ಲವು. ದಾಸನಪುರದಲ್ಲಿ ರೇಶನ್ ಮನೆ ತುಸು ಊರು ಬಿಟ್ಟು ಹೊರಗೇ ಇದ್ದಂತಿದೆ. ಅದು ಹಂಚಿನಮನೆ. ಮಧ್ಯದಲ್ಲಿಯ ಅಂಗಳವು ತುಸು ದೊಡ್ಡದಾಗಿಯೇ ಇದೆ.

ಅಲ್ಲಿ ನಾಲ್ಕು ಭಾಗಗಳಿದ್ದ ಗೋಡೆಗಳು ಎರಡಾಳೆತ್ತರ ಅವೆ. ಇದನ್ನು ಹಾರುವ ಉಪಾಯವನ್ನು ಎರಡು ದಿನಗಳಿಂದ ಎಣಿಕೆ ಹಾಕಿ ನಾಗನು ಗೊತ್ತು ಮಾಡಿಕೊಂಡಿದ್ದನು. ಆ ಮನೆಯ ಪಕ್ಕದಲ್ಲಿಯ ಬೇವಿನ ಮರವೊಂದು ತನ್ನ ಟೊಂಗೆಯನ್ನು ರೇಶನ್ನ ಮನೆಯ ಮೇಲೆ ಹಾಯ್ಸಿತ್ತು. ಇದೂ ಒಂದು ಅನುಕೂಲವೇ, ಗಿಡವನ್ನು ಹತ್ತಿ ಟೊಂಗೆಯಿಂದ ಮಾಳಿಗೆಗೆ ಬರಬೇಕು. ಒಂದೆರಡು ಹಂಚು ತೆಗೆದು ಒಳಗೆ ನಡುಮನೆಯಲ್ಲಿ ಇಳಿಯುವಾಗ ಅಲ್ಲಿಯ ಕಂಬದಿಂದ ಮೆಲ್ಲಗೆ ಹಾರಿಬಿಡುವದು, ಎಂದು ಗೊತ್ತು ಮಾಡಿಕೊಂಡನು ನಾಗನು—ಇಲ್ಲದಿದ್ದರೆ ಡೊಣ್ಣೆಯ ಸಹಾಯದಿಂದ ಮೆಲ್ಲಗೆ ಧುಮುಕಿ ಬಿಡುವದು ! ಪ್ರಸಂಗ ಬಂದಂತೆ ನಡೆದರಾಯಿತು, ಎಂದುಕೊಳ್ಳುತ್ತ ಊರ ಕಡೆ ಸಾಗಿದನು.

ಪ್ರಪಂಚವೆಲ್ಲವೂ ತನ್ನ ಹೆಜ್ಜೆಯ ಕೆಳಗಿರುವಂತೆ ನಾಗನಿಗೆ ಭಾಸವಾಯಿತು. ಕಾಲು ಕಿತ್ತುತ್ತ ಹೆಜ್ಜೆ ಇಡಹತ್ತಿದನು. ಇನ್ನೂ ದಾಸನಪುರ ಒಂದು ಮೈಲು ಅದೆ. ರಾತ್ರಿಯೂ ಬಹಳವಾಗಿರಬಹುದು; ೧೧—೧೨ಗಂಟೆಯಾಗಿರಬೇಕು. ಜನಗದ್ದಲವಂತೂ ಇಲ್ಲವೇಇಲ್ಲ. ವಿಲಂಬವಾದಷ್ಟು ನೆಟ್ಟಗೆ ಎಂದು ನಿಧಾನವಾಗಿ ಸಾಗಿದನು. ಎಷ್ಟು ನಿಧಾನವಾಗಿ ಸಾಗಿದರೇನು. ರೇಶನ್ನ ಮನೆ ಬಂದೇಬಿಟ್ಟಿತು.

ಎದೆಯು 'ಧಸ್' ಎಂದಿತು. ಏಕೋ ಬಡೆದುಕೊಳ್ಳಹತ್ತಿತು. ಸುತ್ತಲೂ ಆವರಿಸಿದ ರಾತ್ರಿಯ ಪ್ರಶಾಂತ ವಾತಾವರಣದಲ್ಲಿ ಅವನ ಎದೆಯ ಹಾರುವಿಕೆಯು ನಿದ್ರಿಸುವ ಜನರನ್ನು ಎಬ್ಬಿಸುವದೋ ಎನ್ನುವಷ್ಟು ಶಬ್ದಮಾಡುವದೆಂದು ನಾಗನಿಗನಿಸಿತು. ನಾಗನು ಧೈರ್ಯ ತಂದುಕೊಂಡನು. ರೇಶನ್ ಮನೆಯ ಮಗ್ಗಲಲ್ಲಿರುವ ಬೇವಿನ ಗಿಡದ ಬುಡದಲ್ಲಿ ಬಂದು, ನಿಂತುಕೊಂಡನು. ಮನೆಯಲ್ಲಿ ಏನೋ ಶಬ್ದವಾದಂತಿತ್ತು. ಗಮನಿಸಿದನು.

"ಅಯ್ಯೋ, ಅಯೋ" ಎಂದು ಯಾರೋ ನೋವು ತಡೆಯದೇ ಕೂಗುತ್ತಿದ್ದರು. ಮತ್ತೊಬ್ಬರು-ಬಹುಶಃ ಇವನು ರೇಶನ್ನದಂಗಡಿಯ ಮಾಲಕನು—ಸಮಾಧಾನಮಾಡುತ್ತಿದ್ದನು, "ಮಗ್ಗಲಾಗಿ ಮಗಲು ಲಕ್ಷ್ಮಿ, ಎರಡು ದಿಂಬನ್ನು ಜೊತೆಯಲ್ಲಿ ಇಡಲೇನು........ಅಂ........ಈಗ ಹೇಗಿದೆ....

"ಸ್ವಲ್ಪ ತಡೆಯಿರಿ ಅಂದರೆ........" ಇದು ಯಜಮಾನಿಯ ಧ್ವನಿ.

"ನೀನು ಕದಲದೇ ಮಲಗು. ನಾನು ಹೋಗಿ ಒಂದು ನಿಮಿಷದಲ್ಲಿ ಸೂಲಗಿತ್ತಿಯನ್ನು ಕರೆದುಕೊಂಡು ಬರುತ್ತೇನೆ.........ಹಾಗಾದರ ನಾನು ಹೋಗಿಬರಲಾ..."

"ನಾನು ಏಳಲಾರೆ.... ಬಾಗಿಲನ್ನು ಯಾರು ಮುಚ್ಚಿಕೊಳ್ಳುವರು? ಹಾಗೆಯೇ ತೆರದಿಟ್ಟು ಹೋಗುವಿರೇನು?"

"ಹೊರಗೆ ಬೀಗ ಹಾಕಿಕೊಂಡು ಹೋಗುತ್ತೇನೆ. ಅದರ ಯೋಜನೆ ಏಕೆ ಐದಾವಿ ನಿಮಿಷದಲ್ಲಿ ಬರುತ್ತೇನೆ."

ರೇಶನ್ನದಂಗಡಿಯ ಒಡೆಯನು ಬಾಗಿಲವನ್ನು ತೆರದದ್ದು ಪುನಃ ಇಕ್ಕಿ ಕೊಂಡು ಬೀಗ ಜಡಿದದ್ದು ನಾಗನಿಗೆ ಕೇಳಿಸಿತು. ಅವನು ಭರದಿಂದ ಸಾಗಿದ್ದನ್ನು ನಾಗನು ಗೋಡೆಯ ಮರೆಯಲ್ಲಿ ನಿಂತೇ ನೋಡಿದನು. ದೇವರ ದಯ. ನಾಗನಿಗೆ ಕಾಲವು ಬಹಳ ಅನುಕೂಲವಾಯಿತು. ನೆಟ್ಟಗೆ ಗಿಡವನ್ನು ಹತ್ತಿ ಟೊಂಗೆಯ ಮೇಲಿನಿಂದ ಮನೆಯ ಮಾಳಿಗೆಯ ಹಂಚಿನ ಮೇಲೆ ಕುಳಿತನು ಒಂದೆರಡು ಹಂಚುಗಳನ್ನು ಬಹಳ ಜತನದಿಂದಲೂ ಎಚ್ಚರಿಕೆಯಿಂದಲೂ ತೆಗೆದನು. ಒಳಗೆ ಇಣಿಕಿ ನೋಡಿದನು. ಮಂದವಾದ ದೀಪದ ಬೆಳಕಿನಲ್ಲಿ ಮೂವರು ಮಕ್ಕಳು ಮಲಗಿ ನಿದ್ರಿಸುತ್ತಿದ್ದುದು ಕಾಣಿಸಿತು. ಯಜಮಾನಿಯು ಮಲಗಿದ ಸ್ಥಳದಮೇಲೆಯೇ ತಾನು ಮಾಳಿಗೆಯ ಮೇಲೆ ಕುಳಿತಿರಬೇಕೆಂದು ಅಂದುಕೊಂಡನು. ಆವಳು ಸುಮ್ಮನೆ ಕಣ್ಣುಮುಚ್ಚಿ ಮಲಗಿದ್ದಳು. ಗಂಡನು ಹೊರಗೆ ಹೋದದ್ದರಿಂದ ತನ್ನ ನೆರಳಾಟವನ್ನು ಯಾರು ಕೇಳುವರೆಂದು ಮಲಗಿದ್ದಳೋ! ಅಥವಾ... ನಿದ್ದೆ ಬಂದಿರಬೇಕೆಂದು ನಾಗನು ತರ್ಕಿಸಿದನು. ಸರಿಮೆಲ್ಲಗೆ ಕೆಳಗಿಳಿದರಾಯಿತು. ಆದರೆ ಹೇಗೆ ಇಳಿಯಬೇಕು? ಎಂದು ಆ ನಡುಮನೆಯನ್ನೆಲ್ಲ ಮೇಲಿಂದಲೇ ಪೂರ್ಣ ನೋಡತೊಡಗಿದನು ನಡುವಿನ ಕಂಬವನ್ನು ಹಿಡಿದುಕೊಂಡು ಜಾರಿದರಾಯಿತು ಎಂದು ತೀರ್ಮಾನಿಸುವಷ್ಟರಲ್ಲಿ ಅತ್ತ ಮೂಲೆಯಲ್ಲಿ ಏನೋ ಹೊಳೆಯುವ ಜೀವಿಯೊಂದು ಮೆಲ್ಲನೇ ಬರುವದನ್ನು ಕಂಡನು. ಸ್ವಾಸ ಬಿಗಿ ಹಿಡಿದನು ರೆಪ್ಪೆ ಹಾಕದೇ ನೋಡಿದನು. ಗಾಬರಿಯಾದನು. ಎದೆ ಹಾರತೊಡಗಿತು. ಬರುತ್ತಿರುವದು ಹಾವು ಎಷ್ಟು ದಪ್ಪವಾಗಿದೆ. ಉದ್ದವೂ ಇದೆ. "ಅಯ್ಯ....ಯ್ಯೊ....ಯ್ಯೋ

ವೂ....ಹಾ....ವೂ ...." ಎಂದು ಲಕ್ಷ್ಮಿ ಕೂಗಿದ್ದು ಮೊದಲೋ ನಾಗನು ಕೆಳಗೆ ಜಿಗಿದು ಕೈಯಲ್ಲಿಯ ದೊಣ್ಣೆಯಿಂದ ಹಾವಿನ ತಲೆ ಕುಟ್ಟಿದ್ದು ಮೊದಲೊ ಹೇಳಲು ಸಾಧ್ಯವಿಲ್ಲ. ಎಲ್ಲವೂ ಒಂದೇ ಕ್ಷಣದಲ್ಲಿ ನಡೆಯಿತು. ಪ್ರಾಣ ಹೋಗುವ ಹೊತ್ತಿನಲ್ಲಿಯೂ ಆ ಹಾವು ಬಾಲವನ್ನು ಸುತ್ತಿ ತಲೆಯನ್ನೆತ್ತಿ ಹಾರಲು ಯತ್ನಿಸಿತು. ಆದರೆ ನಾನಾವಿಧದ ಹಾವುಗಳನ್ನು ಹೊಡೆದ ರೂಢಿಯಿದ್ದ ನಾಗನು ಅದನ್ನು ಏಳಗೊಡದಂತೆ ಹೊಡೆದು ಹಾಕಿದನು.

"ಅಪ್ಪಾ, ನೀನಾರು, ದೇವರಂತೆ ಬಂದಿ, ನೀನಿಲ್ಲದಿದ್ದರೆ ನನ್ನ ಮಕ್ಕಳ ಗತಿ ಏನಾಗುತ್ತಿತ್ತು! ನನ್ನ ಮನವು ಇನ್ನು ನಡುಗುವದು. ನಾನು ಯಾರಿಗೂ ಕೆಡಕು ಮಾಡಿಲ್ಲ.........ಎಂದು ಅಳಹತ್ತಿದಳು,

"ಅಳಬೇಡಿ ಅಮ್ಮಾ....ಗಾಬರಿಯಾಗಬೇಡಿರಿ ಅದು ಸತ್ತಿತು.

ರೇಶನ್ನ ಅಂಗಡಿಯ ಯಜಮಾನನು ಕೀಲಿ ತೆರೆದ ಸಪ್ಪಳವಾಯಿತು. ಓಡುತ್ತ ಯಜಮಾನ ಒಳಗೆ ಬಂದು ನೋಡಿದ. ಅಳುವ ಹೆಂಡತಿ, ಸತ್ತು ಬಿದ್ದ ಹಾವು. ದೊಣ್ಣೆ ಹಿಡಿದ ನಾಗ ಆಶ್ಚರ್ಯ. ಗಾಬರಿಗಳಿಂದ ಕೇಳಿದ

" ಏನಿದು ? "

" ಈ ಹಾವನ್ನು ನೋಡೀ " ಎಂದು ಮಲಗಿದ ಹೆಂಡತಿ ಹಾವಿನ ಕಡೆ ಬೆರಳುಮಾಡಿ ತೋರಿಸಿದಳು. "ಈ ಬಾಲಕನು ಬರದಿದ್ದರೆ ನಾವೆಲ್ಲರೂ ಇಂದು 'ಕೃಷ್ಣಾರ್ಪಣ'ವಾಗುತ್ತಿದ್ದೆವು."

'' ಅಬ್ಬಾ... ಎಷ್ಟು ದೊಡ್ಡದಿದೆ ಈ ಹಾವು! ಯಾರನ್ನೂ ಕಚ್ಚಲಿಲ್ಲ ವಲ್ಲ!" ಎಂದು ನಡಗುತ್ತಲೇ ಯಜಮಾನ ನುಡಿದ.

" ಯಾರಿಗೂ ಏನೂ ಆಗಿಲ್ಲ. ಈ ದೇವದೂತನೇ ನಮ್ಮನ್ನು ಕಾಪಾಡಿದನು, ಎಂದು ಕರ ಜೋಡಿಸಿದಳು ಯಜಮಾನಿ.

ಯಜಮಾನನು ನಾಗನನ್ನು ಅಪ್ಪಿಕೊಂಡನು "ಅಪ್ಪಾ ನಿನ್ನ ಉಪಕಾರವನ್ನು ನಾನು ಈ ಜನ್ಮದಲ್ಲಿ ತೀರಿಸಲಾರೆ. ನನ್ನ ಮಕ್ಕಳನ್ನು ಉಳಿಸಿ ನನ್ನ ಮನೆತನ ಬೆಳಗಿದೆ.... ಲಕ್ಷ್ಮಿ, ನಿಜವಾಗಿಯೂ ನನ್ನಿಂದ ಈ ಹಾವನ್ನು

ಹೊಡೆಯುವದಾಗುತ್ತಿರಲಿಲ್ಲ. ಗಾಬರಿಯಿಂದ ನಡುಗಿ ಬಿಡುತ್ತಿದ್ದೆ...ಇವನ
ಮೀರಸು........"

ಆವರೆ ಒಮ್ಮೆಲೆ ಯಜಮಾನನಿಗೆ ಒಂದು ಸಂಶಯು ಬಂದಿತು. ತೆರ
ಬಾಗಿಲಿಗೆ ಕೀಲಿ ಹಾಕಿತ್ತು. ಇವನು ಇಲ್ಲಿ ಹೇಗೆ ಬಂದನು! ಹೀಗೇ ಮನೆಯ
ಸುತ್ತಲೂ ನೋಡಿದನು. ಮೇಲೆ ಬೆಳಕಿಂಡಿಯೊಳಗಿಂದ ಬೆಳಕು ಬಿದ್ದಂತಿತ್ತು.
ಬೆಳಕಿಂಡಿ ಅಲ್ಲವದು. ಹಂಚನ್ನು ಕಿತ್ತಿ ಒಳಗೆ ಜಿಗಿದಿದ್ದಾನೆ ಕಳ್ಳ. ಯಜ
ಮಾನನ ಕಣ್ಣುಗಳು ಸಿಟ್ಟಿನಿಂದ ಕೆಂಪಾದವು. ಸಿಟ್ಟಿನಿಂದಲೇ ಮೈ ನಡು
ಗಿತು. ರೊಚ್ಚಿಗೆದ್ದನು. ಆವೇಶ ತುಂಬಿ ತಿರಸ್ಕಾರದಿಂದ ಕೂಗಿದನು.

"ಕಳ್ಳ"

"ಕಳ್ಳ .... ನಾನಲ್ಲ ಸ್ವಾಮೀ, ನಾನು ಕಳುವು ಮಾಡಲು ಬಂದಿಲ್ಲ.
ಆ ಬುದ್ಧಿಯೂ ನನಗಿಲ್ಲ. ಮುಪ್ಪಿನ ತಾಯಿತಂದೆಗಳಿಗೆ ವಿಧವೆ ಅಕ್ಕನಿಗೆ
ಹೊಟ್ಟೆತುಂಬ ಕೂಳು ಸಿಕ್ಕಿಲ್ಲ. ಕಳ್ಳಪೇಟೆಯಲ್ಲಿ ಕಾಳು ತರಲು ನನ್ನಲ್ಲಿ
ದುಡ್ಡು ಇಲ್ಲ. ಆದ್ದರಿಂದ .... .... ಆದ್ದರಿಂದ .... .... "

"ಆದ್ದರಿಂದ ನನ್ನ ಮನೆ ಸುಲಿಯಲು ಬಂದಿರುವಿರಿ ಅಲ್ಲವೇ? ನಿಲ್ಲು
ನಿನ್ನನ್ನು ಪೋಲೀಸರ ವಶಕ್ಕೆ ಕೊಡುವೆನು." ...

"ಇಲ್ಲಿ ನೋಡಿ ಅಂದ್ರೆ — ಇವನು ಇಂದು ನಮ್ಮ ಜೀವದಾನ
ಮಾಡಿದ್ದಾನೆ" ಯಜಮಾನಿ ಆಯಾಸದಿಂದ ನುಡಿದಳು "ಏನೋ ಹುಡುಗ
ಬುದ್ಧಿ ಕಾಲುಜಾರಿದೆ..."

ಯಜಮಾನನು ಪೋಲಿಸನನ್ನು ಕರೆತರಲು ಹೊರಹೊರಡಲನುವಾ
ದನು

"ಇದು ಒಂದು ಸಲ ಬಿಟ್ಟುಬಿಡೀ ಅಂದ್ರೀ. ನಿಮ್ಮ ಮಗನೇ ಹೀಗೆ
ಮಾಡಿದ್ರೆ ... ನೀವು ಏನು ಮಾಡ್ತಾ ಇದ್ರೀ ಅಂದ್ರೆ ....

ಯಜಮಾನನು ಪೋಲಿಸರನ್ನು ಕರೆತರಲು ಹೊರಗೆ ಓಡಿದನು.

"ಇಲ್ಲಿ ನೋಡೀ ಅಂದ್ರೆ ... ...."

"ನಾನು ನಿರಪರಾಧಿ" ನಾಗನ ಧ್ವನಿ ಯಾರಿಗೆ ಕೇಳಿಸಬೇಕು!

## ತಾಯಿ

" ಅತ್ತೆ " ಎಂಬ ಶಬ್ದವೇ ಹೀಗೇನೊ, ಅವಳು ಸೊಸೆಯನ್ನು ಎಷ್ಟು ಪ್ರೀತಿಸಿದರೂ, ಜನರು ಆಡಿಕೊಳ್ಳುವದೂ ತಪ್ಪದು. ಸೊಸೆಯು ಅತ್ತೆಯನ್ನು ಒಂದು ವಿಲಕ್ಷಣ ರೀತಿಯಲ್ಲಿ ನೋಡುವದೂ ತಪ್ಪದು. ಅತ್ತೆಯು ಮನೆಯನ್ನು ಬಿಟ್ಟು ಹೊರಗೆ ಹೋದರೆ ಮಗ ಸೊಸೆ ಕೂಡಿ ಅವಳನ್ನು ಹೊರಗೆ ಹಾಕಿದರು, ಎಂದು ಜನರು ಆಡಿಕೊಳ್ಳುವರು. ಜಗತ್ತೇ ಹೀಗೆಂದು ತೋರುವದು. ರುಕ್ಮಮ್ಮ ಮನೆಬಿಟ್ಟು ಹೋದಾಗಿನಿಂದ ಆದಿಶೇಷ ಮತ್ತು ಭಾನುಮತಿಯನ್ನು ಎಲ್ಲರೂ ದೂಷಿಸತೊಡಗಿದರು. " ಅಯ್ಯೋ ಪಾಪ, ಅವಳ ಪಾಡಿಗೆ ಅವಳು ಮೂಲೆಯಲ್ಲಿ ಬಿದ್ದಿರುತ್ತಿದ್ದಳು. ಅವಳನ್ನು ಈ ಸತಿಪತಿಯರು ಹೊಡೆದು ಓಡಿಸಿಬಿಡಬೇಕೇ ? ಪಾಪ ! ಮುದುಕಿ ಅವಳು ಎಲ್ಲಿಗೆ ಹೋಗಬೇಕು ! ಈ ಮುಪ್ಪಿನಲ್ಲಿ ಅವಳನ್ನು ಯಾರು ನೋಡಿಕೊಳ್ಳುತ್ತಾರೆ ! ಶುದ್ಧ ಅನ್ಯಾಯ " ಎಂದು ಮಾತಾಡಿಕೊಳ್ಳುವರು.

ಆದರೆ ಆದಿಶೇಷ ಭಾನುಮತಿಯರು, ಮುದುಕಿ ಮನೆ ಬಿಟ್ಟಂದಿನಿಂದ ಹಾಯಾಗಿಯೇ ಇದ್ದರು. ಯೌವನದ ಅಲೆಗಳಲ್ಲಿ ಸ್ವೇಚ್ಛಾವೃತ್ತಿಯಿಂದ ತೇಲಾಡತೊಡಗಿದರು. ಭಾನುಮತಿಯು ವಿಧವಿಧವಾಗಿ ತಲೆಬಾಚಿಕೊಂಡು ಹೂ ಮುಡಿದುಕೊಂಡು, ಮುಖಕ್ಕೆ ಪಾವುಡರ ಹಚ್ಚಿಕೊಂಡು, ಒಳ್ಳೇ ಶೀರೆಯನ್ನು ಶೋಕಾಗಿ ಉಟ್ಟುಕೊಂಡು, ಗಂಡಬರುವ ಹೊತ್ತನ್ನು ನಿರೀಕ್ಷಿಸುತ್ತ ಕಿಟಕಿಯಲ್ಲಿ ಕುಳಿತುಕೊಳ್ಳುವಳು. ಅವನು ಬರುವಾಗಲೇ ಎದುರುಗೊಳ್ಳುವಳು. ಅವನಿಗೆ ಪರಮಭಾಗ್ಯ, ಭಾನುಮತಿಯು ವಾರೆಗಣ್ಣಿನಿಂದ ಅವನನ್ನು ನೋಡುವಳು. ಹಾಸ್ಯಗಳಿಗೆ ಪ್ರಾರಂಭವಾಗುವದು.

ಆ ಮೇಲೆ " ಅಡಿಗೆ ಏನು ? " ಎಂದು ವಿಚಾರಿಸುವನು. ಅವಳು ಹೇಳುವಳು.

" ಬೇಷ್, ಇವತ್ತು ಏನು ತಿನ್ನಬೇಕೆಂದು ಬಯಸಿದ್ದೆನೊ ಅದನ್ನೇ ಮಾಡಿದ್ದಿಯಲ್ಲಾ ! ನಿನಗೆ ಹೇಗೆ ಗೊತ್ತಾಯಿತು ? "

" ಹೇಗೋ ಗೊತ್ತಾಯಿತು. ಎದ್ದು ಬನ್ನಿ "

" ಹೇಗೆ ಗೊತ್ತಾಯಿತು ಹೇಳು ಆ ಮೇಲೆ ಬರುವೆನು "

" ಆಯ್ಯೋ ಬನ್ನೀ ಅಂದ್ರೆ........ " ಎಂದು ಪತಿಯ ರಟ್ಟೆ ಹಿಡಿದ್ದು ಎಳೆಯುವಳು ಭಾನು.

ಈ ಆನಂದದಲ್ಲಿ ಪ್ರಪಂಚ ಹೇಗೆ ತಿರುಗಿದರೇನ. ! ರಜದ ದಿನಗಳಲ್ಲಿ ಇಬ್ಬರೂ ಕೂಡಿ ಅಡಿಗೆ ಮಾಡುವರು. ಇಬ್ಬರೂ ಕೂಡಿ ಊಟ ಮಾಡುವರು. ಇಬ್ಬರೂ ಎಲೆಯಡಿಕೆ ಮೆಲ್ಲುವರು, ತಮಾಷೆ ಮಾಡುವರು ನಗುವರು, ನಲಿಯುವರು, ಸಾಗಿತು. ಈ ಆನಂದಮಯ ಸಂಸಾರದಿನಗಳು ಉರುಳಿದವು.

ಜಗತ್ತಿನಲ್ಲಿ ಹಗಲಿನ ಹಿಂದೆ ರಾತ್ರಿ ಬರುವಂತೆ ಸುಖದ ಹಿಂದೆ ದುಃಖ ಬರುವದು ತಪ್ಪಿದ್ದಲ್ಲ. ಸಂಸಾರ ಸುಖದಲ್ಲಿ ತೇಲಾಡಿತು. ಎಂದೆನ್ನುವಷ್ಟರಲ್ಲಿ ಎಲ್ಲಿಂದಲೋ ಬಿರುಗಾಳಿ ಬಂದು ಬಿಡುವದು, ನೌಕೆಯು ಹೊಯ್ದಾಡಹತ್ತುವದು. ಭಾನುಮತಿಯ ಪ್ರಕೃತಿ ಹಾಗೆ ಹಾಗೆಯೋ ಎನ್ನಬಹುದು. ಇತ್ತಿತ್ತಲಾಗಿ ಏನೋ ವ್ಯಸರಿಯಾಗಿಲ್ಲವೆಂದು ಭಾನುಮತಿಯು ಡಾಕ್ಟರರಲ್ಲಿ ವಾರಕ್ಕೆರಡು ಸಲ ಹೋಗಿ ಇಂಜಕ್ಶನ್ನ ಮಾಡಿಸಿಕೊಂಡು ಬರಹತ್ತಿದಳು. " ವಿಶ್ರಾಂತಿ ಪಡೆಯಿರಿ " ಎಂಬುದು ಡಾಕ್ಟರನ ಆಗ್ರಹದ ಸೂಚನೆ. ಆದುದರಿಂದ ಖಾನಾವಳಿಯಿಂದ ಊಟ ಬರತೊಡಗಿತು.

ಖಾನಾವಳಿಯ ಕೂಳು ಇಬ್ಬರ ಮೈಗೂ ಹಿಡಿಯಲಿಲ್ಲ. ಒಬ್ಬ ಅಡಿಗೆಯವಳನ್ನು ಇಟ್ಟುಕೊಳ್ಳುವ ವಿಚಾರ ನಿರ್ಣಯವಾಯಿತು. ಅಡಿಗೆಯವಳೂ ಸಿಕ್ಕಳು. ತುಸು ದಿವಸ ಸೂತ್ರವಾಗಿ ಎಲ್ಲವೂ ಸಾಗಿತು. ಖಾನಾವಳಿಯ ಊಟ ತಪ್ಪಿತೆಂದು ದಂಪತಿಗಳು ಹಾಯಾಗಿದ್ದೆವೆನ್ನುವದರಲ್ಲಿಯೇ ಮನೆಯಲ್ಲಿ ಮತ್ತೆ ಅವ್ಯವಸ್ಥೆಗೆ ಪ್ರಾರಂಭವಾಯಿತು. ಅಡಿಗೆಯವಳು ಚನ್ನಾಗಿ ಅಡಿಗೆ ಮಾಡುವದಿಲ್ಲವೆಂದು ಭಾನುವಿನ ಹಟ. ಸಾಮಾನುಗಳನ್ನು ಅನಾವಶ್ಯಕವಾಗಿ ಹಾಳುಮಾಡುವಳೆಂದು ಇನ್ನೊಂದುದೂರು. ಹೀಗೆ ನಡೆಯುವದರಲ್ಲಿಯೇ ಅಡಿಗೆಯವಳು ವಾರದಲ್ಲಿ ಮೂರು ದಿನ ತಪ್ಪಿಸಹತ್ತಿದಳು.

'ಇಂದು ತನ್ನ ತಮ್ಮ ಬಂದಿದ್ದಾನೆ. ನಾಳೆ ತನ್ನ ಸೋದರಸೊದರಸೊಸೆಯ ಲಗ್ನ" ಹೀಗೆ ಏನೇನೋ ನೆವಹೇಳತೊಡಗಿದಳು. ತನಗೆ ಕಾಯಲೆಯಾಗಿದೆ ಯೆಂದು ಒಮ್ಮೆ ಐದು ರೂಪಾಯಿಗಳನ್ನು ಎಡ್ವಾನ್ಸ ತೆಗೆದುಕೊಂಡು ಹೋದಳು. ಮತ್ತೊಮ್ಮೆ ತಮ್ಮನ ಹೆಂಡತಿಗೆ "ಕುಬುಸ" ಮಾಡುವದಿದೆಯೆಂದು ಎಂಟು ರೂಪಾಯಿಗಳನ್ನು ಕೇಳಿದಳು. ಕಡೆಗೆ ಅಡಿಗೆಯವಳ ಕಾಟವೇ ಜೋರಾಗಿ ಅವಳ ತಲೆಯ ಮೇಲೆಯೇ ೬ ರೂಪಾಯಿಗಳನ್ನು ಬಿಟ್ಟು ಕಳಿಸಿ ಬಿಟ್ಟರು. ಮತ್ತೆ ಖಾನಾವಳಿಯ ಕೂಳು ಮನೆಗೆ ಬರಹತ್ತಿತು. ತುಸು ದಿವಸಗಳಲ್ಲಿ ಇದು ಬೇಜಾರಾಯಿತು. ಮತ್ತೊಬ್ಬ ಅಡಿಗೆಯವಳನ್ನು ಆದಿ ಶೇಷನು ನೋಡಿದನು. ಕೆಲದಿನ ಅವಳು ಇದ್ದು ಹೋಗಿಬಿಟ್ಟಳು, ಆ ಮೇಲೆ ಖಾನಾವಳಿ ಕೂಳು ನಡೆಯಿತು. ಹೀಗೆಯೇ ಒಮ್ಮೆ ಖಾನಾವಳಿಯ ಊಟ, ಒಮ್ಮೆ ಅಡಿಗೆಯವಳು, ಒಮ್ಮೆ ಅಡಿಗೆಯವಳು ಒಮ್ಮೆ ಖಾನಾವಳಿ ಈ ರೀತಿಯಾಗಿ ಸಾಗಿತು.

ಭಾನುಮತಿಗೆ ಏನೋ ಒಂದು ತರದ ವಿಲಕ್ಷಣ ಜಡ್ಡು, ಇದ್ದಕ್ಕಿದ್ದಂತೆ ಮೂರ್ಛೆ ಬಂದು ಮಲಗುವಳು. ಅರ್ಧ ತಾಸಿಗೆ ಎಚ್ಚರಾಗುವದು. ಹೀಗಾದ ದಿನವೆಲ್ಲ ಪೂರ್ಣ ಅಶಕ್ತತೆ, ಮೇಲೆ ಏಳಲು ಕೂಡ ಉತ್ಸಾಹಬಾರದು. ಮರುದಿನ ಮತ್ತೆ ಗುಣವಾಗಿ ಮೊದಲಿನಂತೆ ಓಡಾಡುವಳು. ತಾನು ಆಫೀಸಿಗೆ ಹೋದಾಗ ಭಾನುಮತಿಗೆ ಮೂರ್ಛೆ ಬಂದರೆ ಹೇಗೆ, ಎಂಬ ಯೋಚನೆಯು ಆದಿಶೇಷನ ಹೃದಯವನ್ನು ಸುಡುವದು, ಒಬ್ಬಂಟಿಗರಬಾಳು ಯಾತಕ್ಕೂ ಬೇಡ ದೇವರೇ ಎಂದು ಉಸಿರಿಡುವನು, ಈ ರೀತಿಯ ಸಂಸಾರದಸುಖವನ್ನು ಆದಿಶೇಷನ ತಾಯಿ ಹೊರಗೆ ಹೋದ ಮೇಲೆ ಈದಂಗತಿಗಳು ಭೋಗಿಸಿದರು.

ದಿನಗಳನು ಜಾರಿದವು. ಈಗ ಆದಿಶೇಷನಿಗೆ ಒಂದೊಂದು ವರುಷದ

X X X X

ಅಂತರದಲ್ಲಿ ಮೂರು ಮಕ್ಕಳಾಗಿದ್ದಾರೆ. ಭಾನುಮತಿಯ ಪ್ರಕೃತಿ ಮೊದಲೇ ಅಶಕ್ತ. ಮೇಲೆ ಮಕ್ಕಳಾದಾಗಿನಿಂದ ಮನೆಗೆಲಸಗಳು ಹೆಚ್ಚಾದವು. ಇಬ್ಬರೇ ಇದ್ದಾಗ ತನಗೆ ಬರುವ ಪಗಾರದಲ್ಲಿ ಅಡಿಗೆಯವಳನ್ನು ಕೂಡಇಟ್ಟುಕೊಳ್ಳಲು ಆಗುತ್ತಿತ್ತು. ಈಗ ಅದಾಗದು. ಮಕ್ಕಳಿಗಾಗಿ ಬೇಕು. ಅವರ ಆರೈಕೆಗಾಗಿ ಬೇಕು. ಹೀಗಾಗಿ ಪಗಾರ ಸಾಲುತ್ತಲೇ ಇರಲಿಲ್ಲ. ಆದರೆ ಭಾನುಮತಿಯ

ಕಾಯಿಲೆ ಹೆಚ್ಚುತ್ತಲೇ ನಡೆಯಿತು. ಮೊದಲು ಮಕ್ಕಳಿಲ್ಲದಾಗ ಅವಳನ್ನು ಆಸ್ಪತ್ರೆಯಲ್ಲಿ ಮಲಗಿಸಿ ಸ್ವಸ್ಥವಾಗಿ ಇರುತ್ತಿದ್ದನು. ಈಗ ಅವಳನ್ನು ಆಸ್ಪತ್ರೆಗೆ ಹಾಕಿದರೆ ಮನೆಯಲ್ಲಿ ಮಕ್ಕಳನ್ನು ನೋಡಿಕೊಳ್ಳುವರಾರು? 'ಅಯ್ಯೋ' ಎಂದು ಆದಿಶೇಷನು ಗೋಳಿಟ್ಟನು.

ಭಾನುಮತಿಯ ಜಡ್ಡು ಗುಣವಾಗಲಿಲ್ಲ. ಕಡೆಗೆ ಆಸ್ಪತ್ರೆಗೆ ಸೇರಿಸಿದ್ದೇ ಆಯಿತು. ಮನೆಯಲ್ಲಿ ತಾಯಿಯಿಲ್ಲದ್ದರಿಂದ ಮಕ್ಕಳು ಹೌಹಾರಿದವು. "ಅವ್ವಾ.... ಎಲ್ಲಿ? ಎಂದು ಮಕ್ಕಳು ಅಳಹತ್ತಿದರೆ ಆದಿಶೇಷನ ಹೊಟ್ಟೆಯಲ್ಲಿ ಬೆಂಕಿ ಸುರುವಿದಂತಾಗಿ ತಾನೂ ಮಕ್ಕಳೊಡನೆ ಮಕ್ಕಳಂತೆ ಅಳುವನು ಆದಿಶೇಷನು ಒಂದು ತಿಂಗಳ ರಜೆಪಡೆದು ಮಕ್ಕಳನ್ನು ಆಡಿಸುವದು, ಆಸ್ಪತ್ರೆಗೆಹೋಗಿಹೆಂಡತಿಯನ್ನು ಕಾಣುವದೂ ಸಾಗಿಸಿದ್ದನು. ಒಂದು ತಿಂಗಳು ಅವಧಿಯು ಮುಗಿಯಲು ತಡವೇ 'ಹಾಹಾ' ಅನ್ನುವದರಲ್ಲಿಯೇ ಮುಗಿಯಿತು. ಆದರೆ ಭಾನುಮತಿಗೆ ಗುಣವಾಗಲಿಲ್ಲ. ದಿನದಿನಕ್ಕೂ ಕ್ಷೀಣಳಾಗತೊಡಗಿದಳು. ಆಧಿಷೇಷನ ರಜೆಯೂ ಮುಗಿದು ಬಿಟ್ಟಿತು.

"ಏನು ಮಾಡಲಿ, ಭಾನು, ಮಕ್ಕಳು ಎದೆಯೊಡೆದುಕೊಂಡಿವೆ. ಇನ್ನೂ ಒಂದು ತಿಂಗಳು ನೀನು ಮನೆಗೆ ಬರುವಂತಿಲ್ಲವೆಂದು ಡಾಕ್ಟರರು ಅನ್ನುವರು. ನನಗೆ ರಜೆ ಇನ್ನುಮುಂದೆ ಸಿಗದು....ಏನುಮಾಡಲಿ....ಹ್ಯಾಗೆ ಮಾಡಲಿ...." ಎಂದು ಹಂಬಲಿಸಿದನು.

ಭಾನುಮತಿಯೂ ಭೋರಿಟ್ಟು ಅತ್ತಳು. ತನ್ನ ದುರ್ದೈವವನ್ನು ಹಳಿದಳು. ಹೋದಜನ್ಮದಲ್ಲಿ ಯಾರ ಮಕ್ಕಳನ್ನು ತಾನು ಅನಾಥರನ್ನಾಗಿ ಮಾಡಿದ್ದಳೋ ಈ ಜನ್ಮದಲ್ಲಿ ತನ್ನ ಎದುರೇ ತನ್ನಮಕ್ಕಳಿಗೆ ಅನಾಥರಾದ ದುಃಖವನ್ನು ತಾನು ಕಾಣುವ ಪ್ರಸಂಗ ಬಂದಿತೆಂದು ಗೋಳಿಟ್ಟಳು.

"ನನಗಾದರೂ ಯಾರಿದ್ದಾರೆ. ತೌರವನೆಯ ಆಪ್ತರೆಂದು ಒಂದು ಪಿಳ್ಳೆಯೂ ಇಲ್ಲ. ಮತ್ತೇನು ಮಾಡುವದು. ನಿಮ್ಮ ತಾಯಿಗೆ ಬರೆಯಿರಿ, ಅವರನ್ನು ಬಿಟ್ಟು ನಮಗೆ ಯಾರಿದ್ದಾರೆ? ಅವರೇ ನಮಗೆ ಗತಿ....."

"ಅವಳು ಬರುವದಿಲ್ಲ. ಈಗ ನಿನಗೆ ಜಡ್ಡಾಗಿದೆ ಎಂದು ಎರಡು ಸಲ

ಬರೆದಿದ್ದೇನೆ ಅವಳು ಬಂದಳೇ ? "

" ತಂತಿ ಬಿಡಿರಿ ಬರುವರು."

o o o o o o

ತಾಯಿ, ಈ ಶಬ್ದವೇ ದೊಡ್ಡವು ವಿಶ್ವವ್ಯಾಪಿ. ತಾಯಿ ಕರುಣೆಯ ಸಾಗರ, ತಾಯಿ ಕ್ಷಮೆಯ ಆಗರ. ಭೂಲೋಕದ ದೇವತೆ. ಮಗನು ಅಹಂಕಾರದಲ್ಲಿದ್ದಾಗ ಅವಳು ಅವನ ಕೂಡ ಕಾದಾಡಬಹುದು. ಮಗನು ತುಸು ತೊಂದರೆಯಲ್ಲಿದ್ದಾನೆಂದು ಕಂಡರೆ " ಅಯ್ಯೋ ಮಗು ನಾನಿದ್ದೇನೆ. ಮೊಗ ಚಿಕ್ಕದು ಮಾಡಬೇಡ. " ಎಂದು ಓಡಿ ಬಂದೇ ಬಿಡುವಳು.

ಹೆಂಡತಿಯು ಸಾಯುವ ಸ್ಥಿತಿಯಲ್ಲಿದ್ದಾಳೆಂದು ಆದಿಶೇಷನಿಂದ ತಂತಿ ಬಂದೊಡನೆಯೇ ರುಕ್ಮಿಣಮ್ಮನ್ನು ಓಡುತ್ತ ಬಂದೇಬಿಟ್ಟರು. ಅವರ ತಪ್ಪುಗಳನ್ನೆಲ್ಲವನ್ನು ಮರತೇಬಿಟ್ಟರು. 'ಸಿಟ್ಟು' ಅವರಿಗೆ ಹಿಂದಕ್ಕೆ ಬಂದಿತ್ತೊ ಇಲ್ಲವೋ ಆದಿಶೇಷನ ಮೇಲೆ, ಹಾಗಾಗಿ ಬಂದಳು.

ತಾಯಿಯನ್ನು ಸ್ವಾಗತಿ ನಮಸ್ಕರಿಸುವಾಗ ಆದಿಶೇಷನ ಕಣ್ಣಿಂದ ಎರಡು ಹನಿ ನೀರು ಅವಳ ಪಾದಗಳ ಮೇಲೆ ಬಿದ್ದವು. ರುಕ್ಮಿಣಮ್ಮ ಮಗನನ್ನು ತಬ್ಬಿಕೊಂಡು ಭೋರಿಟ್ಟು ಅತ್ತರು. "ನಿನಗೆಷ್ಟು ಕಷ್ಟವಪ್ಪಾ" ಎಷ್ಟು ಬಡವಾಗಿದ್ದೀಯಪ್ಪಾ, ನಿನ್ನನ್ನು ಬಿಟ್ಟು ಹೋದ ನಾನೇ ನೀಚಳು. ನಾನೇ ಕಠೋರಳು" ಎಂದು ಅತ್ತರು. ಮೊಮ್ಮಕ್ಕಳನ್ನು ಮುದ್ದಿಟ್ಟರು. "ನಾನು ಬಂದಿದ್ದೇನೆ. ಇನ್ನೇನು ಕಷ್ಟವಿಲ್ಲವಪ್ಪಗಳಿರಾ" ಎಂದು ಸಂತೈಸಿದರು. ಆಸ್ಪತ್ರೆಗೆ ಓಡಿದರು. ಸೊಸೆಯನ್ನು ಎತ್ತಿದರು. "ಏನೂ ಕೆಡಕಾಗದಮ್ಮಾ, ನಿನಗೆ ಗುಣವಾಗುವದು. ನಾನಿದ್ದೇನೆ" ಎಂದರು. ಭಾನುಮತಿಯ ದುಃಖ ನಿಲ್ಲಲಿಲ್ಲ. "ಅತ್ತೆ ನಾನು ಪಾಪಿ" ಎಂದು ಅತ್ತಳು. "ಅಳಬೇಡಮ್ಮಾ ಈಗೇನಾಗಬಾರದ್ದಾಗಿದೆ. ಸುಮ್ಮನಾಗು. ನಿನ್ನ ಗಂಡ ಮೊದಲೇ ಹೆಣ್ಣರಳಿನವ. ಹೀಗೆ ನೀನು ಅಳುವದನ್ನು ಕಂಡರೆ ಅವನು ನೆಲ ಹಿಡಿದಾನು. ಸುಮ್ಮನಾಗು. ನಾನಿದ್ದೇನೆ" ಎಂದು ಸಂತೈಸಿದರು.

ಆದರೆ ಭಾನುಮತಿಯು ಗುಣಹೊಂದಲಿಲ್ಲ. ಆಸ್ಪತ್ರೆಯವರು ಮನೆಗೆ ಒಯ್ಯಲು ಸೂಚಿಸಿದರು. ಆದಿಶೇಷನು ಅವಳನ್ನು ಮನೆಗೆ ತಂದನು.

ರುಕ್ಮಿಣಮ್ಮನು ಸೊಸೆಯನ್ನು ಹಗಲು ರಾತ್ರಿ ಎನ್ನದೆ ನೋಡಿಕೊಂಡು ಶುಸ್ರೂಷೆಮಾಡತೊಡಗಿದಳು. ಮನೆಗೆ ಬಂದೆನೆಂಬ ಸಮಾಧಾನ ಭಾನುಮತಿಗಾಯಿತು. ಕಣ್ಣು ತೆರೆದಾಗೊಮ್ಮೆ ಮಕ್ಕಳನ್ನು ಕಂಡು ತೃಪ್ತಿಪಡುತ್ತಿದ್ದಳು. ಒದರಿದಾಗೊಮ್ಮೆ ಪತಿಯು ದರ್ಶನವಾಗುತ್ತಿತ್ತು. ಮೇಲೆ ಅಮೃತಹಸ್ತದ ರುಕ್ಮಿಣಮ್ಮನ ಶುಸ್ರೂಷೆ ನಡೆದೇ ಇತ್ತು.

ತುಸು ದಿವಸಗಳಲ್ಲಿ ಭಾನುಮತಿಯು ಚೇತರಿಸಿಕೊಳ್ಳತೊಡಗಿದಳು. ಓಡಾಡತೊಡಗಿದಳು. ಮನೆಗೆಲಸಗಳಲ್ಲಿ ಮೆಲ್ಲನೆ ತೊಡಗಿದಳು. ಶಕ್ತಿ ಬಂದಿತು. ಮೊದಲಿನ ಎಲ್ಲ ರೋಗ-ರುಜಿಗಳು ಪೂರ್ಣ ಮಾಯವಾದವು.

ದಿನಗಳು ಜಾರಿದವು. ತಿಂಗಳುಗಳು ಹೋದವು. ಒಂದು ಸಣ್ಣ ಮಾತಿಗಾಗಿ ಅತ್ತೆ ಸೊಸೆಯರಲ್ಲಿ ವಾಗ್ವಾದವಾಯಿತು. ಪತ್ನಿಯ ಪಕ್ಷಹಿಡಿದು ಆದಿಶೇಷನು ವಾದಿಸಿದನು.

"ಮಗು ನನ್ನಿಂದ ನಿನಗೂ ತೊಂದರೆ, ನಿನ್ನ ಹೆಂಡತಿಗೂ ತೊಂದರೆ ನಾನು ಹೋಗಿಬರುವೆನಪ್ಪಾ ನೀನು ಸುಖಿಯಾಗಿರು" ಎಂದು ಮತ್ತೆ ರುಕ್ಮಿಣಮ್ಮನು ತಂಗಿಯ ಮನೆಗೆ ಗಂಟು ಮೂಟೆ ಕಟ್ಟಿದರು.

ಈ ಸಲ ಮಾತ್ರ "ಏಕೆ? ಏನು? ಹ್ಯಾಗೆ?" ಎಂದು ಯಾರೂ ಕೇಳಲಿಲ್ಲ.

## ಅತಿಥಿ

ಆಫೀಸಿನಿಂದ ಬಂದ ಕೂಡಲೆ, ಅಂಗಿಯನ್ನು ಬಿಚ್ಚಿ ಕೋಟನ್ನು ರ್‍ಯಾಕ್‌ನಲ್ಲಿ ತಗಲಿಸಿ "ಉಸ್" ಎಂದು ಒಂದು ನಿಮಿಷ ಕುರ್ಚಿಯಲ್ಲಿ ಕುಳಿತೆ. ತಕ್ಷಣ ವಿಮಲು ಸರಕ್ಕೆಂದು ಒಳಗೆ ಹೋಗಿ ಒಂದು ಲೋಟಾದಲ್ಲಿ ಕಾಫಿಯನ್ನು ತಂದಿಟ್ಟು, ನನ್ನ ಕೋಟಿನ ಜೇಬುಗಳಲ್ಲಿ ಕೈಯಿಟ್ಟು ಹುಡುಕಿದಳು. ಅನಂತರ ಮೇಜಿನಮೇಲೆ ಏನಾದರೂ ಇಟ್ಟಿದ್ದೇನೇನೋ ಎಂದು ನೋಡಿದಳು. "ನಾನು ಹೇಳಿದ್ದು ನೀವು ತರಲಿಲ್ಲ?" ಎಂದಳು.

"ಏನು?"

"ಏನೇ? ತುಂಬಾ ಚನ್ನಾಗಿದೆ. ಬೆಳಿಗ್ಗೆ ಮತ್ತೆ ಏತಕ್ಕಾಗಿ ನಿಮ್ಮ ಹತ್ರ ಐದು ರೂಪಾಯಿ ಕೊಟ್ಟಿದ್ದು ? ' ಹೇರ್ ಆಯಿಲ್ ತರಲು ಮರೆಯಬೇಡಿ ' ಎಂದು ನೀವು ರಸ್ತೆಗೆ ಹೋದಾಗಲೂ ಹೇಳಿದೆನಲ್ಲಾ ! ನಾನು ನನಗಾಗಿ ಏನು ತರಬೇಕೆಂದು ಹೇಳಿದರೂ ತರುವುದಿಲ್ಲ.ವೆಂದು, ಇವಳು ಹೇಳುವುದನ್ನು ನಾನು ಏಕೆ ಕೇಳುವುದು ಎಂಬ ಅಹಂಕಾರದಿಂದಲ್ಲವೇ ಇವತ್ತು ತರದೇ ಬಂದಿರೀ ? ಇನ್ನುಮೇಲೆ ನಿಮ್ಮನ್ನು ನಾನು ಏನಾದರೂ ತರುವಂತೆ ಹೇಳಿದರಲ್ಲವೆ ! ಇರಲಿ " ಎಂದಳು.

" ವಿಮಲೂ ! ಅಲ್ಲವೇ ನಿನಗೆ ಮೂಗಿನಮೇಲೆಯೇ ಕೋಪ ಇರುತ್ತೆ ನಾನು ನಿನಗೆ ತಂದು ಕೊಡದೆ. ಮತ್ತೆ ಯಾರಿಗೆ ತಂದು ಕೊಡುತ್ತೇನೆ ? ' ಎಂದು ಕೇಳಿದೆ.

" ಹೌದು ! ಈ ಮಾತಂತೂ ಯಾವಾಗಲೂ ಇದ್ದೇ ಇರುತ್ತೆ ! ನನಗೆ ಏನಾದರೂ ಬೇಕಾದರೇ, ನಿಮ್ಮ ಹತ್ತಿರ ಸಾವಿರ ಸಲ ಹೇಳಬೇಕು. ನಂತರವೇ ನೀವು ತರುವುದು. ಆದಿರಲಿ, ಐದು ರೂಪಾಯಿನಲ್ಲಿ, ಬಾಕಿ ಎಂಟಾಣೆ? ಮಾತ್ರ ಇದೆಯಲ್ಲಾ ? ಮಿಕ್ಕ ೪॥ ರೂಪಾಯಿಗಳನ್ನು ಏನು ಖರ್ಚು ಮಾಡಿದಿರಿ ? ಇವತ್ತು ಕ್ಲಬ್‌ದಲ್ಲಿ ಯಾರಿಗಾದರೂ ಸಪ್ಲೈ ಮಾಡಿದಿರೇನು ?" ಎಂದು ಕೇಳಿದಳು

" ಹೌದು! ಮಧ್ಯಾಹ್ನ ಒಂದು ಗಂಟೆಗೆ ಉಪಹಾರಕ್ಕೆ ಕ್ಲಬ್‌ಗೆ ಹೋದೆ. ದಾರಿಯಲ್ಲಿ ನನ್ನ ಆಪ್ತನೊಬ್ಬ ಸಿಕ್ಕಿದ. ಅವನು ಇವತ್ತು ಮೇಲ್‌ದಿಂದ ಬಂದನಂತೆ. " ಬೆಳಿಗ್ಗೆಯೇ ನಿಮ್ಮ ಮನೆಗೆ ಬರುತ್ತಿದ್ದೆ ಆದರೆ, ನನ್ನ ಸ್ನೇಹಿತರೊಬ್ಬರ ಜೊತೆಯಲ್ಲಿ, ಕೇಸ್ ವಿಷಯವಾಗಿ ಬಂದಿರುವುದರಿಂದ, ಅವರ ಜಾಗಕ್ಕೆ ಹೋಗಬೇಕಾಯ್ತು" ಎಂದು ಹೇಳಿದ " ಎಂದೆ.

" ಹೌದು ಹಳ್ಳಿಯಿಂದ ಪಟ್ಟಣಕ್ಕೆ ಬರುವವರಿಗೆಲ್ಲ ಬೇರೇನು ಕೆಲಸ ? ನೀವೊಬ್ಬರು ಒಂದೂ ತಿಳಿಯದೆ ಇರುವವರು, ಇದ್ದೀರೆಂದು ಎಲ್ಲರಿಗೂ ಗೊತ್ತು. ಪಟ್ಣಕ್ಕೆ ಬಂದಾಗೆಲ್ಲ " ಎಲ್ಲಿ ಮನೆ ಮಾಡಿದ್ದೀರಿ " ಎಂದು ಹುಡುಕಿಕೊಂಡು ಬಂದು ಬಿಡುತ್ತಾರೆ! ಸರಿ! ಆಮೇಲೆ ಅವನನ್ನು ಹೋಟಿಲಿಗೆ ಕರೆದುಕೊಂಡು ಹೋದಿರೇನು ? "

"ಹೌದು! ಒಬ್ಬ ಮನುಷ್ಯ ನನ್ನ ಜೊತೆಯಲ್ಲಿ ಮಾತಾಡುತ್ತ ಹೋಟಲ್ ತನಕ ಬಂದರೆ, 'ನಾನು ಟಿಫಿನ್ ತಿಂದು ಬರುತ್ತೇನೆ; ನೀನು ಹೊರಗೆ ನಿಂತಿರು'" ಎಂದು ಹೇಗೆ ಹೇಳುವುದು? ಒಳಗೆ ಹೋದೆವು. ಅವನೇ ಟಿಫಿನ್ ಆರ್ಡರ್ ಮಾಡಿದನು.

"ಏನು, ಆವನಿಗೆ ಸ್ವಲ್ಪವೂ ಸಂಕೋಚವಿಲ್ಲವೆಂದು ಕಾಣುತ್ತೆ! ಏನೇನು ಲಗಾಯಿಸಿದಿರೀ?

"ನಾನು, ಒಂದು ಕಪ್ ಬಾದಾಮಿಕೀರ್, ಒಂದು ದೋಸೆ, ದಮ್ರೋಟ್ ತಿಂದೆ. ಅವನು, ಬಾದಾಮಿಹಲ್ವ, ದೋಸೆ, ಫ್ರೂಟ್‌ಸ್ಯಾಲೆಡ್ ಐಸ್‌ಕ್ರೀಂ, ಜಹಾಂಗೀರ್, ಇನ್ನು ಏನೇನೋ ತಿಂದನು"

"ಅವನ ಹೊಟ್ಟೆ ಕೊಳಗವೋ ಏನು? ತಿನ್ನುವುದರಲ್ಲಿ ಕುಂಭಕರ್ಣನೆಂದು ಕಾಣುತ್ತೆ! ಬಿಲ್ಲೆಷ್ಟಾಯ್ತು?"

"ಎರಡೂವರೆ ರೂಪಾಯಾಯ್ತು! ನಾನೇ ದುಡ್ಡು ಕೊಟ್ಟೆ."

"ಬೀದೀಲಿ ಹೋಗುವವರಿಗೆಲ್ಲ, ದಿನಕ್ಕೆ ಎರಡು ರೂಪಾಯಲ್ಲಿಯ ಉಪಹಾರ ತಿನ್ನಿಸುತ್ತ ಇದ್ದರೆ, ಹೇಗೇನೆ ಸಂಸಾರ ಮಾಡುವುದು? ಹೀಗೆ ಎಲ್ಲರಿಗೂ ನೀವು ಟಿಫನ್ ಕೊಡಿಸುತ್ತೀರಲ್ಲ, ನಿಮಗೆ ಯಾರಾದರೂ, ಎಂದಾದರೂ, ಕೊಡಿಸಿದ್ದಾರೇನು? ಯಾವತ್ತಾದರೂ ನೀವು, "ವಿಮಲೂ, ಅವನು ಇವತ್ತು ತಿಂಡಿಕೊಡಿಸಿದ. ನೀನು ತಿಂಡಿಗಾಗಿ ಬೆಳಿಗ್ಗೆ ಕೊಟ್ಟರೂಪಾಯಿ ಹಿಡಿ" ಎಂದು ನನ್ನ ಹತ್ತಿರ ವಾಪ್ಸು ಎಂದಾದರೂ ಕೊಟ್ಟಿದ್ದೀರೇನು?"

"ವಿಮಲೂ! ನೀನು ಹೇಳುವುದೇನೋ ಸರಿ. ಮೊಂಡುತನ ಮಾಡಿ ನನ್ನ ಹಿಂದೆಯೇ ಕ್ಲಬ್‌ಗೆ ಬಂದರೆ, ನಾನು ಅವನಿಗೆ ಟಿಫನ್ ಕೊಡಿಸದೆ ಏನು ಮಾಡಬೇಕು, ನೀನೇ ಹೇಳು!"

"ಏನು ಮಾಡಬೇಕೆಂದು ಕೇಳುತ್ತೀರೋ? ಅವನು ಯಾವ ಬುದ್ಧಿಯಿಂದ ತಿಂದನೋ, ಆ ಬುದ್ಧಿಯಿಂದಲೇ ಅವನೇ ಹಣ ಕೊಡುತ್ತಾನೆ. ನೀವು ಮಾತ್ರ ಕೋಟ್ ಜೇಬಿನಲ್ಲಿ ಕೈತುರುಕಿ, ಪರ್ಸ್ ಹುಡುಕುವವರಂತೆ ನಟಿಸಿ. "ಅಯೋ! ಪರ್ಸು ಇಲ್ಲವಲ್ಲಾ! ಬೆಳಿಗ್ಗೆ ಮನೆಯಿಂದ ಹೊರಡುವ ಅವ

ಸರದಲ್ಲಿ, ಮನೆಯಲ್ಲೇ ಇಟ್ಟು ಮರೆತೆವೋ ಅಥವಾ ಬರುವ ದಾರಿಯಲ್ಲಿ ಕೆಳಗೆ ಬಿದ್ದು ಕಳೆದು ಹೋಯ್ತೋ ಏನೋ ಗೊತ್ತಾಗಲಿಲ್ಲವಲ್ಲಾ " ಎಂದು ಹೇಳಿದ್ದರೆ, ಅವನೇನು, ನಿಮ್ಮ ಕೋಟಿನ ಜೇಬಿನಲ್ಲಿ ಕೈಯಿಟ್ಟು ಹುಡುಕುತ್ತಾನೇನು! ಅವನೇ ನಿಮ್ಮದೂ ಸೇರಿಸಿ ಹಣ ಕೊಡುತ್ತಿದ್ದ "

" ವಿಮಲೂ! ನೀನು ತುಂಬಾ ಬುದ್ಧಿವಂತಳು. ಆ ಯೋಚನೆ ಬೆಳಗ್ಗೆ ನನಗೆ ಹೊಳೆಯಲೇ ಇಲ್ಲ. ಅದರಿಂದ ಪರವಾಗಿಲ್ಲ. ಅವನು ಪಟ್ಟಣಕ್ಕೆ ಆಗಾಗ್ಗೆ ಬರುತ್ತಿರುತ್ತಾನೆ. ಇನ್ನು ಮೇಲೆ ನೀನು ಹೇಳಿದಂತೆಯೇ ಮಾಡುತ್ತೇನೆ. ಗಂಟೆ ಎಷ್ಟು? ವಾಚ್ ನೋಡು?"

"ಗಂಟೆ, ಎಂಟಕ್ಕೆ ಐದು ನಿಮಿಷ ಇದೆ "

"ಎಂಟು ಗಂಟೆ ಏನು? ಮರೆತೇ ಹೋಯಿತಲ್ಲಾ! ಅವನು ರಾತ್ರಿ ಎಂಟು ಗಂಟೆಗೆ ನಮ್ಮ ಮನೆಗೆ ಊಟಕ್ಕೆ ಬರುತ್ತೇನೆಂದು ಹೇಳಿದ್ದ. ಊಟವಾದಕೂಡಲೆ ತಿನ್ನುವದಕ್ಕೆಂದು ಎರಡು ರೂಪಾಯಿಯ ಸೇಬಿನಹಣ್ಣು ತಂದಿದ್ದೇನೆ. ಬ್ಯಾಗ್‌ನಲ್ಲಿದೆ ನೋಡು!

"ಏನು! ಊಟಕ್ಕೆ ಬೇರೆ ಬರುತ್ತಾನೋ? ಮಧ್ಯಾಹ್ನ ಟಿಫನ್ ಕೊಡಿಸಿದ್ದು ಸಾಲದೆಂದು, ಊಟಕ್ಕೆ ಬೇರೆಕರೆದಿರೇನು? ಊರಲ್ಲಿರುವ ಊಟದ ಹೋಟೆಲ್‌ಗಳು ಎಲ್ಲಿಗಾದರು ಹೊರಟುಹೋದವೋ? ಈ ಮನೆ ಛತ್ರವೇನು? ನಾನು ಒಬ್ಬಳು ಅಡಿಗೆಯವಳು ಇದ್ದೇನೆಂದು, ನಿಮಗೆ ತಿಳಿದವರೆಲ್ಲರನ್ನೂ ಊಟಕ್ಕೆ ಕರೆದುಕೊಂಡು ಬಂದರೆ, ನಾನು ಹೊಣೆಯೇ! ನನ್ನಿಂದ ಇಷ್ಟು ಹೊತ್ತಿನಮೇಲೆ ಒಲೆಹೊತ್ತಿಸಿ ಅಡಿಗೆ ಮಾಡುಲುಸಾಧ್ಯವಿಲ್ಲ. ನಮ್ಮಿಬ್ಬರಿಗೆ ಮಾತ್ರ ಮಧ್ಯಾಹ್ನದ ಅಡಿಗೆ ಮುಚ್ಚಿಟ್ಟಿದ್ದೇನೆ. ನನಗಾಗಿ ನೀವೇನು ವಿಚಾರಪಡಬೇಕಾಗಿಲ್ಲ. ಅವನಿಗೆ ಬಡಿಸಿ, ನೀವು ಊಟಮಾಡಿ, ನಾನೇನು ಬೇಡವೆನ್ನುವುದಿಲ್ಲ," ಎಂದಳು.

ಆಗಹೊರಬಾಗಿಲ ಬಳಿ ಯಾರೋ ಬರುವ ಹೆಜ್ಜೆಯ ಶಬ್ದಕೇಳಿಸಿತು.

" ಯಾರಲ್ಲಿ!" ಎಂದು ಕೇಳಿದೆ.

"ನಾನು ಪರಸ್ಥಳದವನು! ಇಲ್ಲಿ ಊಟಕ್ಕೆ ಕೊಡಬಹುದೇ?" ಎಂದು ಕೇಳುತ್ತ, ಒಳಗೆ ಒಬ್ಬರು ಬಂದರು.

"ಅಣ್ಣಾ, ಯಾವಾಗ ಬಂದಿ ?" ಎಂದು ವಿಮಲಾ ಉತ್ಸುಕ ಸಂತೋಷದಿಂದ ಕೇಳಿದಳು.

" ಇವತ್ತು ಬೆಳಿಗ್ಗೇನೆ ಬಂದೆ. ಮೊದಲು ನಿಮ್ಮ ಮನೆಗೆ ಬರಬೇಕೆಂದೇ ಇದ್ದೆ. ಆದರೆ, ನನ್ನ ಸ್ನೇಹಿತರೊಬ್ಬರ ಜೊತೆಯಲ್ಲಿ, ಕೇಸ್ ವಿಷಯವಾಗಿ ಬಂದಿರುವುದರಿಂದ, ಅವರ ಹಿಂದೆ ಅವರ ಮನೆಗೆ ಹೋಗಬೇಕಾಯ್ತು. ಏಕೆ, ನಿನ್ನ ಯಜಮಾನರನ್ನು 'ಕ್ಲಬ್' ಹತ್ತರ ನೋಡ್ದಿ, ತುಂಬಾ ಹೊತ್ತು ಮಾತಾಡುತ್ತಿದ್ದೆವಲ್ಲಾ. ಅವರೂ ನಾನು ಇಬ್ಬರೂ ತಿಂಡಿ ತಿಂದೆವು. ಅವರು ನನ್ನನ್ನು ನೋಡಿದೆನೆಂದು ನಿನ್ನ ಹತ್ತಿರ ಹೇಳಲಿಲ್ಲವೇ ? " ಎಂದು ಕೇಳಿದನು.

" ಇಲ್ಲ. ಈಗಲೇ ಅವರು ಆಫೀಸಿನಿಂದ ಮನೆಗೆ ಬಂದರು. ನಿನ್ನ ವಿಷಯವಾಗಿ ಏನೋ ಮಾತಾಡಬೇಕೆಂದು ಇದ್ದರು. ಅಷ್ಟು ಹೊತ್ತಿಗೆ ನೀನು ಬಂದೀ " ಎಂದಳು.

ಸ್ವಲ್ಪಹೊತ್ತುಮಾತಾಡುತ್ತಿದ್ದು, ಆ ಮೇಲೆ ಒಳಗೆಹೋಗಿ, ವಿಮಲೂ ಸಡಗರದಿಂದ ಅಡಿಗೆ ಮಾಡಲುಪಕ್ರಮಿಸಿದಳು ! ಕಾಯುವ ತುಪ್ಪದ ವಾಸನೆಯು ಮನೆಯೆಲ್ಲಾ ತುಂಬಿತು !

## ಶುಕ್ರದಶೆ

ಹಳದೀ ಬಣ್ಣದ ಒಂದು ಸೀರೆ ತೆಗೆದು ಇಟ್ಟಿದ್ದೇನೆ. [ ದರ್ಬಾರ್ ಆಯಿತು ] ಹಾಕಿದ. ಬೆಲೆ ೨೦೦ ರೂಪಾಯಂತೆ ಏನು ಹೇಳುತ್ತಿರೋ ಹೇಳಿ" ಕೊಂಡು ಕೊಂಡು ಬಿಡಲೇನು ? " ಎಂದು ಶಾರದಾ, ತನ್ನ ಗಂಡನ ಎಲೆಯಲ್ಲಿ ಬಡಿಸುತ್ತ ಕೇಳಿದಳು.

"ಈ ಹೆಂಗಸರ ಪದ್ಧತಿಯೇ ಇದು ಊಟ ಮಾಡುವ ಹೊತ್ತು ನೋಡಿ ಸೀರೆ, ಒಡವೆ ಇವುಗಳ ವಿಷಯ ಮಾತಾಡುವುದು ! " ಎಂದು ರಘುರಾಮನ ಉತ್ತರ ಕೊಟ್ಟನು.

' ಬಾಕಿ ಹೊತ್ತಿನಲ್ಲಿ ನೀವು ಎಲ್ಲಿ ಕಿವಿಗೊಟ್ಟು ಕೇಳುತ್ತೀರಿ ? ಯಾವಾಗ ನೋಡಿದರೂ, ಆಫೀಸ ಕೆಲಸ ಆಫೀಸ ಕೆಲಸವೆಂದು

ಆಫೀಸ್ ಕೆಲಸದ ವಿಷಯುವನ್ನು ತಾನೇ ಸ್ಮರಿಸುತ್ತಿರುತ್ತೀರಿ ? " ಎಂದು ಗರಸವಾಗಿ ಮಾತಾಡಿದಳು ಶಾರದಾ.

ಬೇರೆ ಹೊತ್ತಾಗಿದ್ದರೆ, ಶಾರದಾ ಉತ್ತರವನ್ನು ಕೇಳಿ, ರಘುರಾಮನು ನಗುತ್ತಿದ್ದನು. " ನೀನು ಹೇಳುವುದು ನಿಜವೇ " ಎಂದು ಹೇಳಿದ್ದನ್ನು ಒಪ್ಪಿಕೊಂಡು, ಅವಳು ಇಚ್ಛಿಸುವ ಸೀರೆಯನ್ನು ತಂದು ಕೊಡುತ್ತಿದ್ದನು. ಆದರೆ ಅವತ್ತು ಇದ್ದ ಅವನ ಸ್ಥಿತಿ ಬೇರೆ. ಅವತ್ತಿನ ಹಿಂದಿನ ದಿನ ಅವನಿಗೂ ಅವನ ಆಫೀಸ್ ಮ್ಯಾನೇಜರಿಗೂ, ನಡೆದ ಒಂದು ವಿಷಯದಿಂದ ಅವನ ಮನಸ್ಸು ನೆಮ್ಮದಿಯಾಗಿರಲಿಲ್ಲ. ಕೆಲಸಕ್ಕೆ ರಾಜಿನಾಮೆ ಕೊಡೊಣವೇ ಎಂದು ಕೂಡ ಯೋಚಿಸುತ್ತಿದ್ದ. ಆದ್ದರಿಂದ, ಶಾರದಾಳ ಮಾತು ಅವನಿಗೆ ಕೋಪ ಬರುವಂತೆ ಮಾಡಿತು.

" ಆಫೀಸ್ ಕೆಲಸ " " ಆಫೀಸ್ ಕೆಲಸ " ಎಂದು, ನಾನು ಸ್ಮರಿಸುತ್ತಿದ್ದರೆ, ನೀನು ಬಿಡುವದಿಲ್ಲವೆ " ರೇಷ್ಮೇ ಸೀರೆ " " ರೇಷ್ಮೇ ಸೀರೆ " ಎಂದು ಸ್ಮರಣೆ ಮಾಡುತ್ತಿರುವಿಯಲ್ಲಾ ! ನಿನಗೆ ಈಗೇಕೆ ರೇಷ್ಮೇ ಸೀರೆ ? ಈಗಾಗಲೆ ನಿನ್ನ ಹತ್ತಿರ ಒಂದು ಡಜನ್ ರೇಷ್ಮೆ ಸೀರೆ ಇವೆಯಲ್ಲಾ ! ಈ ವರ್ಷವೇನೂ ಕೊಂಡುಕೊಳ್ಳುವ ಉದ್ದಿಶ್ಯವಿಲ್ಲ. ಮೂರುವರೆ ರೂಪಾಯಿನಲ್ಲಿ ಒಂದು ಮಿಲ್ ಸೀರೆ ಕೊಂಡು ಕೊಡುತ್ತೇನೆ ಅಷ್ಟೇ " ಎಂದು ಖಂಡಿತವಾಗಿ ಹೇಳಿ ಎದ್ದನು.

" ಏತಕ್ಕೆ ಪಾಪ, ಮೂರುವರೆ ರೂಪಾಯನ್ನು ತಾನೆ ಕರ್ಚು ಮಾಡಬೇಕು !........ಆ ಮಿಲ್ ಸೀರೆಯನ್ನು ಕೂಡ ತೆಗೆಯಬೇಡಿ ನೀವು ! " ಎಂದು ಸಿಟ್ಟಿನಿಂದ ನುಡಿದು , ಒಂದು ಮೂಲೆಯಲ್ಲಿ ಹೋಗಿ ಕೂತು, ಕಣ್ಣಿನಲ್ಲಿ ಗಂಗೆಯನ್ನು ಹರಿಸಿದಳು.

ರಘುರಾಮನಿಗೆ ಇದು ಗೊತ್ತಾದರೂ ತಕ್ಷಣ ಹೋಗಿ ಸಮಾಧಾನ ಮಾಡಬೇಕೆಂದು ತೋರಲಿಲ್ಲ, "ಹೆಂಗಸರೇ ಹೀಗೆ ! .... ಹಟಮಾರಿಗಳು! ಸಾಹಸವಂತರು " ಎಂದು ತನ್ನಷ್ಟಕ್ಕೆ ತಾನೇ ಗೊಣಗಿಕೊಂಡು ಆಫೀಸಿಗೆ ಹೊರಟುಹೋದನು.

ಎಂದು ವಿಚಾರಪಟ್ಟಿರಲ್ಲಾ ! ನಿಜವಾಗಿಯೂ ಬರುವುದು ! ಇಂಥವರ ಮಗ, ಇಂತಹ ನಗದ ಅಂಗಡಿಯಲ್ಲಿ ಕಳವು ಮಾಡಿದನೆಂದು ನಾವು ಪ್ರಕಟಿಸದೇ ಬಿಡುತ್ತೇವೆನು ? ... ಮಿಸ್ಟರ್ ವಿಜಯಶಂಕರ್ ! ನನ್ನ ಜೊತೆಯಲ್ಲಿ ಸ್ಟೇಷನ್ನಿಗೆ ಬಂದು ಇವತ್ತು ಸಾಯಂಕಾಲ ಆರು ಗಂಟೆ ಯಿಂದ ಎಂಟು ಗಂಟೆಯ ತನಕ ಎಲ್ಲೆಲ್ಲಿದ್ದಿರಿ, ಏನೇನು ಮಾಡಿದಿರಿ ಎಂಬು ದನ್ನು ಹೇಳಬೇಕಾಗಿದೆ ! ಹೊರಡಿರಿ " ಎಂದರು.

ಶೇಷಾಚಲನು ತಲೆಯನ್ನು ಹಿಡಿದುಕೊಂಡನು. ಅವನ ಕಿವಿಯ ಹತ್ತಿರ ಜವಾನನು " ಇನ್ಸಪೆಕ್ಟರರು ಇಷ್ಟು ಕ್ರೂರವಾಗಲು ಕಾರಣ ಗೊತ್ತೇನು ? ಹೊಡೆಸಿಕೊಂಡನಲ್ಲಾ ಒಬ್ಬ ಗುಮಾಸ್ತ, ಅವನು ಇನ್ಸ್‌ಪೆಕ್ಟರರ ಅಕ್ಕನ ಮಗ " ಎಂದನು.

## ನಾಲಿಗಿಲ್ಲದ ಗುಬ್ಬಿ.

ಜಪಾನದ ಗುಡ್ಡಗಾಡಿನಲ್ಲಿ, ಬಹು ಎತ್ತರ ಪ್ರದೇಶದಲ್ಲಿ ಓರ್ವ ಮುದಿದಂಪತ್ತು ಗುಡಿಸಲನ್ನು ಕಟ್ಟಿಕೊಂಡು ವಾಸಿಸುತ್ತಿತ್ತು. ಮುದು ಕನ ಸಂಸಾರವು ಸುಖಮಯವಾಗಿರಲಿಲ್ಲ. ಹೆಂಡತಿಯು ಅವನಿಗಿಂತಲೂ ವಯಸ್ಸಿನಲ್ಲಿ ಹಿರಿಯಳು, ಬಹು ಸಿಡುಕು ಸ್ವಭಾವದಳು. ತುಸು ಹೆಚ್ಚು ಕಡಿಮೆಯಾದರೆ ಸಾಕು ಗಂಡನಮೇಲೆ ಸಿಕ್ಕಂತೆ ಒದರಾಡುವಳು, ಅಪ ಮಾನ ಮಾಡುವಳು, ಬೈಯುವಳು. ಪಾಪ, ಮುದುಕ ಮುಪ್ಪಿನಲ್ಲಿ ಅವ ನಿಗೆ ಗೆಳೆಯರಾರೂ ಇರಲಿಲ್ಲ. ಅವನು ತನ್ನ ಮನರಂಜನೆಗಾಗಿ ಒಂದು ಗುಬ್ಬಿಯನ್ನು ಸಾಕಿದ್ದನು. ಇವಳು ಅದಕ್ಕೆ ಸಹ ತೊಂದರೆ ಕೊಡುವಳು.

ಹೀಗಿರಲಾಗಿ ಒಂದು ದಿನ ಮುದುಕನು ಹೊಲದ ಕೆಲಸಕ್ಕೆ ಹೋ ದನು. ಅವನ ಹೆಂಡತಿಯು ಒಳಗೆ ಬಂದು ನೋಡಿದಳು, ಅರಿವೆಗಳನ್ನು ಒಗೆಯುವದು ಅವಳ ಪಾಲಿಗೇ ಬಿದ್ದಿತ್ತು. ಅರಿವೆಗಳನ್ನು ಒಗೆಯುವದು ಅವಳಿಗೆ ಆಗದ ಕೆಲಸ, ನೀರು ತರಬೇಕು; ಬಾಗಿಸಿಂತು ಒಗೆಯಬೇಕು; ಅವುಗಳನ್ನೆಲ್ಲ ಹಿಂಡಿ ಹೊರಗೆ ಹಗ್ಗಕ್ಕೆ ಒಣಹಾಕಬೇಕು. ಆದುದರಿಂದ ಅವಳಿಗೆ ಬಹಳ ಶ್ರಮವಾಗುವದು, ಟೊಂಕ ನೋಯುವದು. ಗಂಡನ

ಮೇಲೆ ಸಹಿಸಲಸಾಧ್ಯವಾದ ಸಿಟ್ಟು ಬಂದಿತು ಅವಳಿಗೆ. ಆದರೆ ಮಾಡಬೇಕೇನು? ಇನ್ನೇ ಸಂಜೆಗೆ ಚಪಾತಿಗಾಗಿ ಗೋದಿಯ ಹಿಟ್ಟು ಬೇಕಾಗಿದ್ದಿತು. ಆದುದರಿಂದ ಹಿಟ್ಟನ್ನು ಬಿಸಿಲಲ್ಲಿಟ್ಟು ಅರಿವೆಗಳನ್ನು ಒಗೆಯುವದಕ್ಕಾಗಿ ಹೊರಗೆ ಒಗೆಯುವ ಕಲ್ಲಿಗೆ ಬಂದಳು. ಅರಿವೆಗಳನ್ನೆಲ್ಲ ಒಗೆದು ಒಣ ಹಾಕಿದಳು. ಗೋದಿಯ ಹಿಟ್ಟು ಚನ್ನಾಗಿ ಒಣಗಿದೆಯೋ ನೋಡಲು ಹೋದಳು. ಆದರೆ ಅಲ್ಲಿ ನೋಡುವದೇನು? ತನ್ನ ಪತಿಯ ಪ್ರೀತಿಗೆ ಪಾತ್ರವಾದ ಗುಬ್ಬಿಯು ಅಲ್ಲಿ ಬಂದು ಹಿಟ್ಟನ್ನೆಲ್ಲ ಮುಕ್ಕಿ ಅಪಾತ್ರೆಯ ಅಂಚಿನಮೇಲೆ ಕುಳಿತು ಬಿಟ್ಟಿದ್ದಿತು. ಅರಿವೆ ಒಗೆಯುವ ಕೆಲಸವು ತನ್ನ ಮೈಮೇಲೆ ಬಿದ್ದದ್ದರಿಂದ ಅವಳು ಮೊದಲೇ ಸಿಟ್ಟಿಗೆದ್ದಿದ್ದಳು. ಗುಬ್ಬಿಯು ಹಿಟ್ಟನ್ನು ತಿಂದುದನ್ನು ನೋಡಿದ ಮೇಲಂತೂ ಬುದ್ಧಿಯು ಅವಳ ಸ್ವಾಧೀನದಲ್ಲಿಯೇ ಉಳಿಯಲಿಲ್ಲ. ಸಿಟ್ಟಿನಿಂದ ಗಡಗಡನೇ ನಡುಗಿದಳು. ಒಳಗೆ ಹೋಗಿ ಕತ್ತರಿಯನ್ನು ತಂದು ಆ ಗುಬ್ಬಿಯ ನಾಲಿಗೆಯನ್ನೇ ಕತ್ತರಿಸಿ ಒಗೆದಳು.

"ಇನ್ನಾದರೂ ಬುದ್ಧಿ ಬರಲಿ. ಕಳುವು ಮಾಡುವದು ಅಪರಾಧವೆಂಬದನ್ನು ತಿಳಿದುಕೋ" ಅನಳು ಅರ್ಭಟಿಸಿದಳು. "ನಡೆ ಇಲ್ಲಿಂದ, ಈಗಲೇ ಹೊರಡು.. ನನ್ನ ಮನೆಯಲ್ಲಿ ನೀನು ಬೇಡ ...." ಹೀಗೆನ್ನುತ್ತ ಆಗುಬ್ಬಿಯನ್ನು ಹೊರಗೆ ತೂರಿ ಬಿಟ್ಟಳು. ಪಾಪ! ಅದು ಅತ್ತತ್ತ ಆಕಾಶದಲ್ಲಿ ಹಾರಾಡಿ ಬಾಯಿಂದ ರಕ್ತ ಸುರಿಸುತ್ತ ಕಣ್ಮರೆಯಾಯಿತು. ಹೊಲದಿಂದ ಮುದುಕನು ಮರಳಿ ಬಂದನು. ಗುಬ್ಬಿಗಾದ ಗತಿಯನ್ನು ಕೇಳಿ ಬಹು ದುಃಖಿತನಾದನು, ಹೆಂಡತಿಯ ಮೇಲೆ ಸಿಟ್ಟಿಗೆದ್ದನು, ಅವಳಮೇಲೆ ಒದರಾಡಿದನು. ಅಂದು ಗಂಡಹೆಂಡಿರು ಬೆಳತನಕ ಜಗಳವಾಡಿದರು. ಮುದುಕನಿಗೆ ಗೆಳೆಯನಾಗಿ ಇರುವ ಒಂದು ಗುಬ್ಬಿಯೂ ಸಹ ಈಗ ಹೋಗಿ ಬಿಟ್ಟಿತು. ಏಕಾಕಿಯಾಗಿ ಬಹು ಬಳಲಿದನು. ಈಗ ಅವನ ಜೊತೆಗಾರರೆಂದರೆ ಜಗಳಗಂಟಿಯಾದ ಅವನ ಮೊಂಡ ಹೆಂಡತಿಯೊಬ್ಬಳು.

ದಿನಗಳು ಸಾಗಿದವು. ತಿಂಗಳುಗಳು ಜಾರಿದವು. ಒಂದುದಿನ ಮುದುಕನು ಅಡವಿಯಲ್ಲಿ ಬಹುದೂರ ತಿರುಗಾಡಲು ಹೊರಟಾಗ "ನಮಸ್ಕಾರ

ರಾಯರೇ" ಎಂಬ ಮಧುರವಾದ ಧ್ವನಿಯೊಂದು ಕೇಳಬಂದಿತು. ಅತ್ತ ಮುದುಕನು ತಿರುಗಿ ನೋಡಿದನು. ತನ್ನ ಪೂರ್ವದ ಗೆಳೆಯನಾದ ಗುಬ್ಬಿಯು ಅಲ್ಲಿ ಕುಳಿತಿದೆ! ಆದರೆ ಅದರ ಸ್ವರವೇ ಬದಲಾಗಿತ್ತು. ನಾಲಗೆಯು ಕತ್ತರಿಸಿ ಹೋದುದರಿಂದ ಮನುಷ್ಯನಂತೆ ಮಾತಾಡುವ ಶಕ್ತಿಯು ಅದಕ್ಕೆ ಬಂದಿದ್ದಿತು.

ಮುದುಕನೂ ಅವನ ಗೆಳೆಯ ಗುಬ್ಬಿಯೂ ಪರಸ್ಪರರು ಬಹಳ ನಮ್ರತನದಿಂದ ನಮಸ್ಕರಿಸಿದರು. ಅಚ್ಚ ಜಪಾನೀ ಪದ್ಧತಿಯಲ್ಲಿ ಗುಬ್ಬಿಯು ಮುದುಕನಿಗೆ ಸ್ವಾಗತವನ್ನು ಬಯಸಿತು, ತನ್ನ ಹೆಂಡತಿ ಮಕ್ಕಳ ದರುಶನ ತೆಗೆದುಕೊಂಡು ಹೋಗಬೇಕೆಂದು ಗುಬ್ಬಿಯು ಮುದುಕನಿಗೆ ಬೇಡಿಕೊಂಡಿತು. ಮುದುಕನು ಅದರ ಬೇಡಿಕೆಗೆ ಒಪ್ಪಿದನು.

ಅಲ್ಲಿಯೇ ಸಮೀಪದಲ್ಲಿ ಬಿದುರಿನ ಮೆಳೆಯಲ್ಲಿ ಗುಬ್ಬಿಯು ಮನೆಮಾಡಿಕೊಂಡು ವಾಸಿಸುತ್ತಿತ್ತು. ಮನೆಯ ಮುಂದಿನ ಇಳಿಜಾರಾದ ಭೂಮಿಯ ಮೇಲೆ ಮನೋಹರವಾದ ಒಂದು ಉದ್ಯಾನವು ಶೋಭಿಸುತ್ತಿತ್ತು. ಅತ್ತ ಒಂದು ನದಿಯು ಹರಿದು ತಡಸಲನ್ನುಂಟು ಮಾಡಿತ್ತು. ಇದನ್ನೆಲ್ಲ ನೋಡಿ ಮುದುಕನಿಗೆ ಬಹಳ ಆನಂದವಾಯಿತು.

ಬಂದ ಅತಿಥಿಗಾಗಿ ಗುಬ್ಬಿಯ ಹೆಂಡತಿಯು ಪಂಚಪಕ್ವಾನ್ನಗಳ ಅಡಿಗೆಯನ್ನು ತಯಾರಿಸಿದಳು. ಜಪಾನದ ಸಮಸ್ತ ಪಕ್ವಾನ್ನಗಳೂ ಅಂದು ಅಲ್ಲಿ ಸಿದ್ಧವಾದವು. ಮುದುಕನನ್ನು ಉಚ್ಚ ಸ್ಥಾನದಲ್ಲಿ ಕುಳ್ಳಿರಿಸಿ ಊಟಕ್ಕೆ ಬಡಿಸಿದರು. ಊಟವಾದನಂತರ ಗುಬ್ಬಿಯ ಹಿರಿಯ ಮಗಳು ಸ್ವತಃ ಚಹವನ್ನು ತಯಾರಿಸಿದಳು. ಅದನ್ನು ಮುದುಕನ ಮುಂದೆ ತಂದಿಟ್ಟು ಮೊಣಕಾಲುಗಳನ್ನೂರಿ ಬಹು ಮರ್ಯಾದೆಯಿಂದಲೂ ವಿನಯದಿಂದಲೂ ಚಹವನ್ನು ಮುದುಕನಿಗೆ ಅರ್ಪಿಸಿದಳು.

"ಏನೋ ಬಡವರು! ಬಡತನದ ರೀತಿಯಲ್ಲಿ ತಮ್ಮನ್ನು ಸ್ವಾಗತಿಸಿದ್ದೇವೆ." ಗುಬ್ಬಿಯ ಪತ್ನಿಯು ಮುದುಕನಿಗೆ ಕರ ಜೋಡಿಸಿ ನುಡಿದಳು. "ತಮ್ಮ ಮರ್ಯಾದೆಗೆ ತಕ್ಕ ಮಾನ ಕೊಡಲು ನಮ್ಮಿಂದಾಗದು...." ಎಂದು

ಮುದುಕನಿಗೆ ಬಹಳೇ ಆಶ್ಚರ್ಯವಾಯಿತು. ಆಶ್ಚರ್ಯದ ಎರಡರಷ್ಟು ಆನಂದವೂ ಆಯಿತು. ಮುದುಕನು ಪುತ್ರೊಮ್ಮೆ ಚಹವನ್ನು ಕುಡಿದು ಹೊರಡಲನುವಾದನು ಆದರೆ ಆ ದಿನ ರಾತ್ರಿಯನ್ನು ತಮ್ಮ ಸಂಗಡ ಕಳೆಯು ಬೇಕೆಂದು ಗುಬ್ಬಿಯು ಸಂಸಾರವೇ ಮುದುಕನನ್ನು ಬೇಡತೊಡಗಿದ್ದರಿಂದ ಆ ದಿನ ಅವನು ಅಲ್ಲಿ ನಿಲ್ಲಬೇಕಾಯಿತು.

ಆ ಪ್ರದೇಶದಲ್ಲಿ ನೋಡತಕ್ಕಂಥ ಎಷ್ಟೋ ದೃಶ್ಯಗಳಿದ್ದವು. ಒಂದೊಂದಾಗಿ ಅವುಗಳನ್ನೆಲ್ಲವನ್ನು ನೋಡುವದರಲ್ಲಿ ದಿನಗಳು ಹೋದದ್ದು ಮುದುಕನಿಗೆ ನೆನಪೇ ಆಗಲಿಲ್ಲ. ಗುಬ್ಬಿಯು ಬಳಗದವರೆಲ್ಲರ ಕೂಡ ಅನೇಕ ಮಾತ್ಯಗಳನ್ನಾಡಿದನು; ನಕ್ಕನು. ಮಕ್ಕಳಂತೆ ಆಡಿದನು; ನಲಿದಾಡಿದನು. ಸಯನ ಮನೋಹರವಾದ ಉದ್ಯಾನದಲ್ಲಿ ಕುಳಿತು ಸಂಜೆಯನ್ನು ಕಳೆಯುವನು. ಗುಬ್ಬಿಯು ಪತ್ನಿಯು ಊಟವನ್ನು ನೀಡಿ ಬುಲ್ಬುಲ್ ತರಂಗವನ್ನು ಬಾರಿಸಿ ಅವನಿಗಾಗಿ ಮಧುರವಾದ ಗಾನವನ್ನು ಹಾಡುವಳು. ಗುಬ್ಬಿಯ ಹೆಣ್ಣು ಮಕ್ಕಳು ನರ್ತನ ಮಾಡುವರು. ಈ ರೀತಿ ಮುದುಕನು ಒಂದು ವಾರವನ್ನು ಕಳೆದನು.

ಒಂದ ದಿನ ತನ್ನ ಹೆಂಡತಿ ಮತ್ತು ಮನೆ ಅವನಿಗೆ ಒಮ್ಮೆಲೆ ನೆನಪಾದವು. "ನಾನು ಈಗ ಹೊರಡಲೇಬೇಕು" ಎಂದು ಮುದುಕನು ಹಟ ಹಿಡಿದನು. ಇವನ್ನು ಕೇಳಿ ಗುಬ್ಬಿಗೆ ಬಹಳ ದುಃಖವಾಯಿತು. ಉಪಾಯ ಗಾಣದೆ ಅದು ಸಮ್ಮತಿಯನ್ನಿತ್ತಿತು. "ಆದರೆ ಹೋಗುವ ಪೂರ್ವದಲ್ಲಿ ಒಂದು ಕಾಣಿಕೆಯನ್ನಾದರೂ ಸ್ವೀಕರಿಸಿರಿ" ಎಂದು ಎರಡು ಬೆತ್ತದ ಬುಟ್ಟಿಗಳನ್ನು ಗುಬ್ಬಿಯು ಮುದುಕನ ಮುಂದೆ ತಂದಿಟ್ಟಿತು. ಒಂದು ಅತಿ ಭಾರವಾಗಿತ್ತು, ಮತ್ತೊಂದು ಬಹು ಹಗುರಾಗಿದ್ದಿತು. "ಇವುಗಳಲ್ಲಿ ಬೇಕಾದ ಒಂದನ್ನು ತಾವು ಸ್ವೀಕರಿಸಬೇಕು. ಕೇವಲ ನಮ್ಮ ಜ್ಞಾಪಕಾರ್ಥವಾಗಿ.... ಇಷ್ಟೇ" ಎಂದು ಬೇಡಿ ಕೊಂಡಿತು.

ಮುದುಕನು ಆಶೆಬುರುಕನಲ್ಲ. ಮೇಲಾಗಿ ಅವನಲ್ಲಿ ಸಾಕಷ್ಟು ಧನ ಕನಕಗಳೂ ಇದ್ದವು. ಆದುದರಿಂದ ಹಗುರಾದ ಬುಟ್ಟಿಯನ್ನೇ ಎತ್ತಿಕೊಂಡು ಅವರ ಅಪ್ಪಣೆಯನ್ನು ತೆಗೆದು ಕೊಂಡನು.

ಮುದುಕನ ಹೆಂಡತಿಯು ಅವನ ಬರವನ್ನೇ ಎದುರು ನೋಡುತ್ತಿರ ಬಹುದೆಂದೂ, ಕಡೆಗೆ ಅವನನ್ನು ಕಂಡು ಮುದುಕಿಗೆ ಆನಂದವಾಯಿತೆಂದೂ ಓದುಗರು ಊಹಿಸಬಹುದು. ಆದರೆ ಮುದುಕನು ಮನೆಯಲ್ಲಿ ಕಾಲಿಡುವ ದೊಂದೇ ತಡ, ಅವನನ್ನು ಬಾಯಿಗೆ ಬಂದಂತೆ ಮುದುಕಿಯು ಬಯ್ಯತೊಡ ಗಿದಳು. ತನ್ನನ್ನು ಎಷ್ಟು ಲಕ್ಷಿಸನೆಂದು ದೂರಿದಳು. ಮುದುಕನು ಹೆಂಡತಿಯನ್ನು ಶಾಂತಪಡಿಸಲು ಬಹಳ ಯತ್ನಿಸಿದನು ತನ್ನ ಯಾತ್ರೆಯ ಕತೆಯನ್ನ ಹೇಳಿ, ತಾನು ತಂದ ಬುಟ್ಟಿಯನ್ನು ಅವಳಿಗೆ ತೋರಿಸಿದನು. ಬುಟ್ಟಿಯ ಮುಚ್ಚಳವನ್ನು ಗಂಡ ಹೆಂಡರಿಬ್ಬರೂ ತೆರೆದರು.

ಎಂಥ ಅದ್ಭುತವಾದ ದೃಶ್ಯವದು. ಆ ಬುಟ್ಟಿಯ ತುಂಬೆಲ್ಲ ಬೆಳ್ಳಿ ಬಂಗಾರದ ತುಣುಕುಗಳಿದ್ದವು. ವಜ್ರ ವೈಢೂರ್ಯ ಮೊದಲಾದ ನವರತ್ನ ಗಳು ಹೇರಳವಾಗಿದ್ದವು. ತಲೆಯ ಮೇಲಿಟ್ಟುಕೊಂಡ ವ್ಯಕ್ತಿಯು ಅದೃಶ್ಯ ನಾಗುವಂತೆ ಮಾಡುವ ಒಂದು ಟೊಪ್ಪಿಗೆಯಿತ್ತು. ಮನಬಯಸಿದ ವಸ್ತು ಗಳನ್ನು ಪಡೆಯಲು ಸಹಾಯಕವಾಗುವ ಮಂತ್ರಗಳ ಒಂದು ಪುಸ್ತಕವೂ ಅದರಲ್ಲಿತ್ತು. ಮತ್ತು ಎಷ್ಟು ವೆಚ್ಚಮಾಡಿದರೂ ತೆರವಾಗದ ರೊಕ್ಕದ ಚೀಲವೊಂದು ಅದರಲ್ಲಿತ್ತು.

ಮುದುಕಿಯು ಇವುಗಳೆಲ್ಲವನ್ನು ನೋಡಿದಳು. "ನಾನೂ ಗುಬ್ಬಿಯ ಲ್ಲಿಗೆ ಹೋಗುವೆನು. ಎಂದು ಕಾಣಿಕೆಗಳನು ತರುವೆನು" ಒಂದು ಉತ್ಸಾ ಹದಿಂದ ಎದ್ದು ನಿಂತಳು.

"ಬೇಡ" ಎಂದನು ಮುದುಕ; "ಈಗ ನಮಗೆ ಬೇಕಾಗಿ ಹೆಚ್ಚು ಉಳಿಯುವಷ್ಟು ಗುಬ್ಬಿಯು ಕೊಟ್ಟಿದೆ. ಇನ್ನೂ ಕೇಳಿದರೆ ಕೇವಲ ಹಾಸ್ಯ ಕ್ಕೀಡಾದೇವು. ಆಶೆಬುರುಕಿಯಾಗಬೇಡ" ಎಂದು ಪರಿಪರಿಯಾಗಿ ಹೇಳಿದನು. ಆದರೆ ಎಲ್ಲವೂ ವ್ಯರ್ಥವಾಯಿತು ಮುದುಕಿಯು ಹುಲ್ಲಿನ ಹ್ಯಾಟನ್ನು ತಲೆಯ ಮೇಲಿಟ್ಟುಕೊಂಡಳು. ಕಾಗದದ ಕೊಡೆಯನ್ನು ಬಗಲಲ್ಲಿ ಸೇರಿಸಿ ಕೊಂಡು ಗುಬ್ಬಿಯೆಡೆಗೆ ಸಾಗಲನುವಾದಳು.

ಗುಬ್ಬಿಯ ಮನೆಗೆ ಹೋಗುವ ದಾರಿಯನ್ನು ತನ್ನ ಪತಿಯಿಂದ ಕೇಳಿ ಮುದುಕಿಯು ಗೊತ್ತುಮಾಡಿಕೊಂಡಳು. ಲಗು ಬಗೆಯಿಂದ ಅತ್ತ ಸಾಗಿ

ದಳು, ಗುಬ್ಬಿಯ ಮನೆಯ ಬಾಗಿಲಿಗೆ ಬಂದಳು. ಬಹು ನಮ್ರತನದಿಂದಲೂ, ಅಂತಃಕರುಣದಿಂದಲೂ ಗುಬ್ಬಿಯನ್ನು ಮಾತಾಡಿಸಿದಳು. ಇವಳ ಈ ವರ್ತನವನ್ನು ಕಂಡು ಗುಬ್ಬಿಗೆ ಬಹಳ ಆಶ್ಚರ್ಯವಾಯಿತು. ಆದರೂ ಅದು ಅವಳಿಗೆ ಸ್ವಾಗತವನ್ನು ಬಯಸಿತು. "ಬಹಳ ದಣಿದಿದ್ದೀರಿ, ಚಹ ತೆಗೆದುಕೊಂಡು ಹೋಗಿರಿ" ಎಂದಿತು. ಗುಬ್ಬಿಯ ಹೆಂಡತಿ ಮಕ್ಕಳು ಮಾತ್ರ ಹೊರಗೆ ಬರಲೇ ಇಲ್ಲ. ಮುದಕಿಯು ಬಂದ ಉದ್ದೇಶವು ಅವುಗಳಿಗೆ ಗೊತ್ತಾಗಿರಬಹುದು.

ಮುದುಕಿಯು ಚಹವನ್ನು ಕುಡಿದು ಹೊರಡಲನುವಾದಳು. ಆದರೆ ಕಾಣಿಕೆಯ ಸುಳುವೇ ಅವಳಿಗೆ ಕಾಣಲಿಲ್ಲ. ತಾನಾಗಿಯೇ ಧೈರ್ಯ ಮಾಡಿ ಗುಬ್ಬಿಯನ್ನು ಕೇಳಿಬಿಟ್ಟಳು. "ಏಕೆ, ನನಗೆ ಕಾಣಿಕೆಯನ್ನು ಕೊಡುವದಿಲ್ಲವೇ ?" ಎಂದು. ಗುಬ್ಬಿಯು ತಲೆ ಕೆಳಗೆ ಮಾಡಿ ಕ್ಷಣ ಹೊತ್ತು ಸುಮ್ಮನೇ ನಿಂತಿತು. ಆ ಮೇಲೆ "ಅಹುದು, ಮರತೇ ಬಿಟ್ಟಿದ್ದೆನು" ಎಂದೆಂದು ಒಳಗೆ ಹೋಗಿ ಮುದುಕನಿಗೆ ತೋರಿಸಿದ ಆಕೃತಿಯುಂಥವೇ ಇರುವ ಎರಡು ಬುಟ್ಟಿಗಳನ್ನು ಹೊರಗೆ ತಂದಿತು. ಯಾವುದಾದರೊಂದನ್ನು ಸ್ವೀಕರಿಸಲು ಮುದುಕಿಗೆ ವಿನಂತಿ ಮಾಡಿಕೊಂಡಿತು. ಅತಿ ಭಾರವಾದ ಬುಟ್ಟಿಯನ್ನೇ ಮುದುಕಿಯು ಆರಿಸಿಕೊಂಡು ಮನೆಯ ಕಡೆಗೆ ಸಾಗಿದಳು. "ಹೋಗಿ ಬರುವೆನು" ಎಂದು ಗುಬ್ಬಿಗೆ ಹೇಳಲು ಕೂಡ ವೇಳೆ ಉಳಿಸದೆ ಭರದಿಂದ ಕಾಲ್ತೆಗೆದಳು.

ಓಡುತ್ತ ಮನೆಗೆ ಬಂದಳು. ಭಾರವಾದ ಬುಟ್ಟಿಯನ್ನು ಹೊತ್ತುಕೊಂಡು ತೇಗುತ್ತ ಬಂದಳು. ಜೀವನದಲ್ಲಿ ದೊಡ್ಡ ವಿಜಯವನ್ನು ಸಂಪಾದಿಸಿದಳೆಂಬ ಆನಂದೋನ್ಮಾದದಿಂದ ಮನೆಗೆ ಬಂದಳು.

"ಎಂಥ ಮೂರ್ಖಳು ನೀನು!" ಮುದುಕನು ನುಡಿದನು. "ಈಗಲೇ ನಮಗೆ ಸಾಕಷ್ಟಿದೆ. ಕಾಣಿಕೆಯನ್ನು ಸ್ವೀಕರಿಸುವದೇ ನಿನ್ನ ಇಚ್ಛೆಯಿದ್ದರೆ ಹಗುರಾದ ಬುಟ್ಟಿಯನ್ನಾದರೂ ಸ್ವೀಕರಿಸಬಾರದಿತ್ತೇ ?"

ಮುದುಕಿಯು ಅವನ ಮಾತನ್ನು ಲಕ್ಷಿಸಲೇ ಇಲ್ಲ. ತಾನು ತಂದ ಬುಟ್ಟಿಯನ್ನು ತನ್ನ ಮುಂದೆ ಇರಿಸಿ ಅದರ ಮುಚ್ಚಳವನ್ನು ತೆರೆದಳು. ಅಬ್ಬಾ....! ಬೆಳ್ಳಿ ಬಂಗಾರದ ವಜ್ರ ವೈಢೂರ್ಯಗಳ ಬದಲು ಅದರಲ್ಲಿ ಒಂದು

ಘಟಸರ್ಪವಿರಬೇಕೆ! ಸರ್ಪವು ಭುಸುಗುಟ್ಟುತ್ತ ಬುಟ್ಟಿಯಿಂದ ಹೊರಬಿದ್ದು ಮುದುಕಿಯನ್ನು ಸುತ್ತುಹಾಕಿಬಿಟ್ಟಿತು. ಅವಳು ಬಿಡಿಸಿ ಕೊಳ್ಳಲು ಪ್ರಯತ್ನಿಸಿದಂತೆ ಹಾವು ತನ್ನ ಸುತ್ತನ್ನು ಬಿಗಿ ಮಾಡಿ ಮಾಡಿ ಕಡೆಗೆ ಅವಳನ್ನು ಕೊಂದುಬಿಟ್ಟಿತು.

ಮುದುಕನು ಈಗ ಹಾಯಾಗಿ ಇದ್ದಾನೆ. ತನ್ನ ಆರೈಕೆಗಾಗಿ ಒಬ್ಬ ಹುಡುಗನನ್ನು ದತ್ತಕ ತೆಗೆದುಕೊಂಡಿದ್ದಾನೆ. ಸಹೃದಯನಾಗಲು ಮುದುಕನು ದತ್ತಕ ಮಗನಿಗೆ ಸದಾ ಉಪದೇಶಿಸುತ್ತಿರುವನು. ಆಶೆಬುರುಕತನವು ಎಂದಿಗೂ ಒಳ್ಳೆಯದಲ್ಲವೆಂದು ಅವನಿಗೆ ಒತ್ತಿ ಒತ್ತಿ ಹೇಳುವನು.

## ಕಾಮುಕನ್ನೂರಿ ಕುಂಡೆ

ಓರ್ವ ಸಿರಿವಂತನಿಗೆ ಮೂರು ಗಂಡು ಮಕ್ಕಳೂ ಒಬ್ಬಳು ಮಗಳೂ ಇದ್ದರು. ಅವನು ತೀರಿದನು. ಮಕ್ಕಳು ಮೆಸಿನಾ ಎಂಬ ಪಟ್ಟಣದಲ್ಲಿ ಅಂಗಡಿಯನ್ನಿಟ್ಟುಕೊಂಡು ವ್ಯವಹಾರವನ್ನು ಸಾಗಿಸುತ್ತಿದ್ದರು ಇವರ ತಂಗಿ ಲಿಸಬೆಟಾಳು ಸುಂದರವಾದ ಹುಡುಗಿ. ಚುರುಕು ಬುದ್ಧಿಯವಳು. ಮತ್ತು ಭಾವನಾಶೀಲಳು. ಅವಳು ದೊಡ್ಡವಳಾಗಿದ್ದರೂ ಅವಳ ಬಂಧುಗಳು ಅವಳ ಲಕ್ಷ್ಯವನ್ನೇ ಮಾಡಿರಲಿಲ್ಲ ಈ ಅಣ್ಣತಮ್ಮಂದಿರು ತಮ್ಮ ಅಂಗಡಿಯ ಕೆಲಸಕ್ಕಾಗಿ ಲೊರೆಂಝೋ ಎಂಬ ಒಬ್ಬ ತರುಣನನ್ನು ನಿಯಮಿಸಿಕೊಂಡಿದ್ದರು. ಲೊರೆಂಝೋನು ಪೃಥುಕಾಯದವನು, ಸುಂದರನು, ಅಂಗಡಿಯ ಎಲ್ಲ ವ್ಯವಹಾರವನ್ನು ಸ್ವತಃ ಅವನೇ ನೋಡಿಕೊಳ್ಳುತ್ತಿದ್ದನು. ಲಿಸಬೆಟಾಳ ದೃಷ್ಟಿಯು ಅವನಮೇಲೆ ಸ್ವಾಭಾವಿಕವಾಗಿಯೇ ಬಿದ್ದಿತು. ಅವನ ವಿಷಯದಲ್ಲಿ ಇವಳಿಗೆ ಒಂದು ತರದ ಆದರ ಭಾವನೆಯು ಹುಟ್ಟಿತು. ಲೊರೆಂಝೋ ಇದನ್ನು ಅರಿತುಕೊಳ್ಳದೇ ಇರಲಿಲ್ಲ. ಅವನು ಕೂಡ ಅವಳನ್ನು ಪ್ರೀತಿಸತೊಡಗಿದನು. ಇಬ್ಬರೂ ಪರಸ್ಪರ ಅರಿತುಕೊಂಡರು. ಅತಿಯಾಗಿ ಹೊಂದಿಕೊಂಡರು, ಇವರಿಬ್ಬರ ಪ್ರಣಯವು ಹಾಗೆಯೇ ಎಷ್ಟೋ ದಿವಸಗಳವರೆಗೆ ಸಾಗಿತ್ತು. ಅವಳ ಅಣ್ಣಂದಿರಿಗೆ ಇದೇನೂ ಗೊತ್ತಿರಲಿಲ್ಲ. ಒಂದು ದಿನ ರಾತ್ರಿ ಲಿಸಬೆಟಾಳು ಲೊರೆಂಝೋನ ಕೋಣೆಯಲ್ಲಿ ಪ್ರವೇಶಿ

ಸಿದುದನ್ನು ಹಿರಿಯ ಅಣ್ಣನು ಅಕಸ್ಮಾತ್ತಾಗಿ ನೋಡಿದನು. ಮನದಲ್ಲಿ ಬಹಳ ನೊಂದುಕೊಂಡು. ತನ್ನ ತಂಗಿಯು ಒಬ್ಬ ಕೂಲಿಕಾರನ ಬಲೆ ಬಿದ್ದುದು. ಅವನಿಗೆ ಬಹಳ ದಿಸಮಾಧಾನವನ್ನುಂಟುಮಾಡಿತು. ಆದರೆ ಆಗ ಅವನು ಒಂದು ಮಾತನ್ನೂ ಆಡಲಿಲ್ಲ. ನೇರವಾಗಿ ಮಲಗಲು ತೆರಳಿದನು. ರಾತ್ರಿ ನಿದ್ರೆ ಬರಲಿಲ್ಲ. ತಂಗಿಯ ಈ ವೃತ್ತಿಯು ಅವನ ಮನವನ್ನು ಅನೇಕ ವಿಷಯಗಳಿಂದ ತುಂಬಿತು. ಮನವು ಏನೇನೋ ಗುಣಿಸತೊಡಗಿತು. ಮರುದಿನ ಮುಂಜಾನೆ ತಾನು ಹಿಂದಿನ ರಾತ್ರಿ ಲಿಸಬೆಟಾ ಮತ್ತು ಲೊರೆಂರ್ಝೋನ ವಿಷಯವಾಗಿ ಕಂಡದ್ದನ್ನು ತನ್ನ ಇಬ್ಬರು ತಮ್ಮಂದಿರಿಗೆ ಹೇಳಿದನು. ಈ ವಿಷಯಕ್ಕೆ ಮೂವರಲ್ಲಿ ಬಹಳ ಹೊತ್ತಿನವರೆಗೆ ಚರ್ಚೆಯಾಯಿತು. ಇದು ತಮಗೇನೂ ಗೊತ್ತಿಲ್ಲದಂತೆ ತಾವು ವರ್ತಿಸಬೇಕೆಂದೂ ಸಮಯನೋಡಿ ಈ ಅಪಮಾನದ ಪರಿಮಾರ್ಜನೆ ಮಾಡಿಕೊಳ್ಳಬೇಕೆಂದೂ ನಿರ್ಣಯಿಸಿಕೊಂಡರು. ದಿನಗಳು ಹೋಗಹತ್ತಿದವು. ಮೂವರು ಬಂಧುಗಳು ಲೊರೆಂರ್ಝೋನ ಸಂಗಡ ಬಹಳ ಸಲಿಗೆಯಿಂದಲೂ ಪ್ರಿತಿಯಿಂದಲೂ ವರ್ತಿಸುವ ಸೋಗುತೊಟ್ಟರು. ಒಂದು ದಿನ ಬಂಧುಗಳು "ಮೋಜು" ಮಾಡುವದಕ್ಕಾಗಿ ಶಹರಕ್ಕೆ ಹೊರಡಲು ನಿಶ್ಚಯಿಸಿದರು. ತಮ್ಮ ಸಂಗಡ ಬರಲು ಲೊರೆಂರ್ಝೋನನ್ನೂ ಕರೆದರು· ಅದಕ್ಕೆ ಅವನು ಒಪ್ಪಿದನು. ಶಹರಕ್ಕೆ ಸಾಗಲನುವಾದರು. ದಾರಿ ಸಾಗಿ ಅವರು ಒಂದು ಏಕಾಂತವಾದ ಸ್ಥಳಕ್ಕೆ ಬಂದರು. ಮೊದಲೇ ವಿಚಾರಿಸಿದಂತೆ ಆ ಬಂಧುಗಳು ಲೊರೆಂರ್ಝೋನನ್ನು ಅಲ್ಲಿಯೇ ಕೊಂದುಬಿಟ್ಟರು. ಯಾರಿಗೂ ತಿಳಿಯದಂತೆ ಬಹು ಜಾಗರೂಕತೆಯಿಂದ ಅವನ ದೇಹವನ್ನು ಹುಗಿದರು. ಮನೆಗೆ ವಾಪಸು ಬಂದರು. ಲೋರೆಂರ್ಝೋನನ್ನು ಮಾಲು ಖರೀದಿಗೆ ಮುಂದಿನ ಶಹರಕ್ಕೆ ತಾವು ಕಳಿಸಿರುವದಾಗಿ ಊರಲ್ಲಿ ಸುದ್ದೀ ಹಬ್ಬಿಸಿದರು. ಮಾಲು ಖರೀದಿಗೆ ಲೋರೆಂರ್ಝೋನೇ ಹೋಗುವವನಾದ್ದರಿಂದ ಈ ಸುದ್ದಿಯನ್ನು ಎಲ್ಲರೂ ನಂಬಿದರು. ಎಷ್ಟೋ ದಿನಗಳು ಕಳೆದವು ಲೊರೆಂರ್ಝೋ ವಾಪಸು ಬರಲೇ ಇಲ್ಲ. ಅವನ ವಿರಹದಿಂದ ಲಿಸಬೆಟಾಳು ಬಹಳ ನೊಂದುಕೊಂಡು ಕಡೆಗೆ ತನ್ನ ಅಣ್ಣಂದಿರನ್ನು ಕೇಳಿದಳು. ಅವನು ಇನ್ನೂ ಏಕೆ ಬರಲಿಲ್ಲವೆಂಬುದರ ವಿಚಾರಾಂಶವನ್ನು ತನಗೆ ಹೇಳೆಂದು ಒತ್ತಾಯಪಡಿಸಹತ್ತಿದಳು. ಕಡೆಗೆ ಒಬ್ಬ ಅಣ್ಣನು

ರಘುರಾಮನ ಈ ನಡತೆಯು, ಅಳುತ್ತಿರುವ ತನ್ನನ್ನು ಸ್ವಲ್ಪವೂ ಗಮನಿಸದೆ ಆಫೀಸಿಗೆ ಹೋದದ್ದು, ಶಾರದೆಯ ಹೃದಯವನ್ನು ಬಾಣ ದಿಂದ ಇರಿದಂತೆ ಆಯಿತು. ಅವಳಿಗೆ ಊಟ ಬೇಕಾಗಲಿಲ್ಲ. ಕೂತ ಸ್ಥಳವನ್ನು ಬಿಟ್ಟು ಕದಲದೆ, ಅವಳು ಕಣ್ಣೀರು ಸುರಿಸುತ್ತಿದ್ದಳು. ಅಳು ತ್ತಲಿದ್ದ ಹಾಗೆಯೇ ಅವಳನ್ನು ನಿದ್ರಾದೇವಿ ಆವರಿಸಿದಳು.

"ಏನು ಶಾರದಾ? ... ದೀಪಾವಳಿ ಹಬ್ಬಕ್ಕೆ ಎಂಥಾ ಸೀರೆ ತೆಗೆದು ಕೊಂಡೆ?" ಎಂದು ಮಗ್ಗಲುಮನೆ ಅಜ್ಜಿವ್ವ ಕೇಳಿದಾಗಲೇ ಶಾರದೆಗೆ ಎಚ್ಚರವಾಯ್ತು.

ಎಚ್ಚರಾದವಳು ಕಣ್ಣೀರನ್ನು ವರೆಸಿಗೊಂಡು, "ಬನ್ನಿ ಅಜ್ಜೀ ಕೂತು ಕೊಳ್ಳಿ" ಎಂದು ದಿನದಂತೆ ಅಜ್ಜಿವ್ವನನ್ನು ಬರಮಾಡಿಕೊಂಡಳು.

"ಕೂತುಕೊಳ್ಳಲು ಈಗ ಹೊತ್ತಿಲ್ಲ, ಶಾರದಾ! ಬೇಗ ಹೋಗ ಬೇಕು!.... ಕಾವೇರಿ ಮನೆಗೆ ಬಂದಿದ್ದೆ ... ನಿನ್ನನ್ನು ಮಾತಾಡಿಸಿ ಹೋರ ಡೋಣವೆಂದು ಬಂದೆ .... ಮನೆಗೆ ಹೋದರೆ ನನ್ನ ಸೊಸೆ ಕೇಳ್ತಾಳು ಶಾರದಾ ಎಂಥ ಸೀರೆ ಕೊಂಡುಕೊಂಡಿದ್ದಾಳೆ ಎಂದು .... ಅದಕ್ಕೋಸ್ಕರ ಬಂದೆ! .... ಎಂಥಾ ಸೀರೆ ಕೊಂಡುಕೊಂಡೆ? ಎಷ್ಟು ರೂಪಾಯಿ?" ಎಂದು ಎಲ್ಲವನ್ನೂ ವಿಚಾರಿಸಿದಳು ಅಜ್ಜಿವ್ವ.

ಶಾರದಳಿಂದ ಮಾತಾಡಲು ಆಗಲಿಲ್ಲ; ದುಃಖವು ಗಂಟಲನ್ನು ಬಿಗಿಹಿಡಿ ದಿತು ಪ್ರತಿವರ್ಷವೂ, ತಾನು ಕೊಂಡುಕೊಂಡು ಸೀರೆಯನ್ನು ಜಂಬದಿಂದ ಅಜ್ಜಿಗೆ ತೋರಿಸುತ್ತಿದ್ದ ಶಾರದೆಗೆ. "ಈ ವರ್ಷ ಸೀರೆಯೇ ಕೊಂಡು ಕೊಳ್ಳಲಿಲ್ಲ!" ಎಂದು ಹೇಳಲು ನಾಚಿಕೆಯಾಗಿತ್ತು; ಆದ್ದರಿಂದ ಮೌನ ವನ್ನು ತಾಳಿದಳು.

ಆದರೆ ಅಜ್ಜಿ ಸುಮ್ಮನೆ ಬಿಡುವಳೇ? .... "ಯಾಕೆ ಮಾತಾಡದೇ ಇದ್ದೀ? .... .... ಇನ್ನೂ ಕೊಂಡಕೊಳ್ಳಲಿಲ್ಲವೇನು?....... ಯಾವದೋ ಹಳದೀ ಸೀರೆ ಅಂಗಡಿಯಿಂದ ತಂದೀಯಂತಲ್ಲಾ?" ಎಂದಳು.

ಶಾರದೆಯು, ಬೇರೆ ಉಪಾಯವಿಲ್ಲದೇ. "ಈ ವರ್ಷ ಮೂರುವರೆ ರೂಪಾಯಿಗೆ ಒಂದು ಮಿಲ್ ಸೀರೆ ಕೊಂಡು ಕೊಡುತ್ತಾರಂತೆ!" ಎಂದು ನಿಜವನ್ನು ಹೇಳಿದಳು.

ಅಜ್ಜಿಗೆ ತಕ್ಷಣ ಕೋಪ ಬಂದು ಬಿಟ್ಟಿತು. ಅವಳೇನೋ ಅವರಿಗೆ ಸಂಬಂಧಪಟ್ಟವಳಲ್ಲದಿದ್ದರೂ, ಶಾರದೆಯ ವಿಷಯದಲ್ಲಿ ಅವಳಿಗೆ ಪ್ರತ್ಯೇಕ ಪ್ರೀತಿಯೂ. ವಿಶ್ವಾಸವೂ ಇತ್ತು. ಆದ್ದರಿಂದ, "ಮುನ್ನೂರು ರೂಪಾಯಿ ಸಂಬಳ ತರುವವನ ಹೆಂಡತಿ, ಮೂರುವರೆ ರೂಪಾಯಿಯ ಸೀರೆ ಕೊಂಡು ಕೊಂಡರೆ ತುಂಬಾ ಚನ್ನಾಗಿರೋದು! ... ... ಬರಲಿ ಅವನು ....ನಾನೇ ಅವನ ಹತ್ತಿರ ಹೇಳುತ್ತೇನೆ!" ಎಂದು ಆಕ್ರೋಶದಿಂದ ಮಾತಾಡಿದಳು.

ಅದನ್ನು ಕೇಳಿದ ಶಾರದಾ, "ಅಯ್ಯೋ! ನೀವು ಒಂದೂ ಹೇಳಬೇಡಿ ಅಜ್ಜೀ! ಆಮೇಲೆ ನಾನು ಹೇಳಿಕೊಟ್ಟೆ ನೀವು ಅನ್ನುತ್ತೀರೆಂದು ತಿಳಿದುಕೊಳ್ಳುವರು. ಏಕೆ ಅನ್ಯಾಯವಾಗಿ ಮನಸ್ತಾಪ?" ಎಂದು ಅಜ್ಜಿಯನ್ನು ಸಮಾಧಾನ ಪಡಿಸಲು ಪ್ರಯತ್ನಿಸಿದಳು.

ಆದರೆ, ಅಜ್ಜಿಯ ಕೋಪ ಶಾಂತವಾಗಲಿಲ್ಲ. "ನೀನು ಶುದ್ಧ ಮೂರ್ಖಳು! ಬಾಯಿದ್ದ ಮಗುವೇ ಬದುಕುವದು? ........ ಈ ಕ್ಷಣದಲ್ಲಿ ಕೊಂಡು ಕೊಡಿ ಎನ್ನು... ತನ್ನಷ್ಟಕ್ಕೆ ತಾನೆ ಕೊಂಡುಕೊಡುತ್ತಾನೆ!" ಎಂದು ಹೇಳಿ ಹೊರಟಳು.

ಅಜ್ಜಿಯವ್ವ ಹೋದನಂತರ, ಅವಳು ಹೇಳಿದ ಮಾತುಗಳನ್ನು ನೆನೆದ ಶಾರದಳಿಗೆ, ತಕ್ಷಣ ಒಂದು ವಿಧದ ಧೈರ್ಯ ಬಂತು. "ಇವತ್ತು ಅವರು ಆಫೀಸಿನಿಂದ ಮನೆಗೆ ಬರುತ್ತಲೂ, ಅವರ ಹತ್ತಿರ ಜಗಳವಾಡಿಯಾದರೂ ಆ ಹಳದಿ ಬಣ್ಣದ ಸೀರೆಯನ್ನೇ ಕೊಂಡುಕೊಳ್ಳುವುದು!" ಎಂದು ತೀರ್ಮಾನಿಸಿದಳು.

ಆದರೆ; ಅವಳು ಎಣಿಸಿದಂತೆ, ರಘುರಾಮನ ಸಂಗಡ ಜಗಳವಾಡಲು ಸಂದರ್ಭವೇ ಸಿಕ್ಕಲಿಲ್ಲ. ಏಕೆಂದರೆ ಅವತ್ತು ಸಾಯಂಕಾಲ ಆಫೀಸಿನಿಂದ ವಾಪಸ್ಸು ಬರುತ್ತಲೂ, ರಘುರಾಮನು ಬೀದಿ ಹೊಸ್ತಿಲಲ್ಲಿ ನಿಂತುಕೊಂಡೆ, "ಶಾರದಾ! ಇಲ್ಲಿ ಬಾ! ಬೇಗ ಓಡಿಬಾ!" ಎಂದು ಕುತೂಹಲದಿಂದ ಕೂಗಿ ಕರೆದನು.

ಒಳಗಿನಿಂದ ಅವಳು ಹೊರಗೆ ಬರುತ್ತಲೂ, "ಇಲ್ಲಿ ನೋಡು ತಮಾಷೆ .... ನನ್ನಿಂದ ನಗು ತಡೆಯಲು ಸಾಧ್ಯವೇ ಆಗಲಿಲ್ಲ!.... ಈ ಕೋತಿಗಳು

ಆಡುವ ನಾಟಕವನ್ನು ನೋಡು! .... .... ಏ ಕೋತಿಯವನೇ ! ಎಲ್ಲಿ, ಇನ್ನೊಂದು ಸಲ ಅದೇ ತಮಾಶೆಯನ್ನು ತೋರಿಸು " ಎಂದು ಉತ್ಸಾಹದಿಂದ ಹೇಳಿದನು.

ಕೋತಿ ಆಡಿಸುವವನು, ರಘುರಾಮನು ಹೇಳಿದಂತೆ, ಕೋತಿಗಳನ್ನು ಮೊದಲು ಕುಣಿಸಿ, ಹೆಣ್ಣುಕೋತಿ ಹೇಳುವಂತೆ ...... " ನನಗೆ ದೀಪಾವಳಿ ಹಬ್ಬಕ್ಕೆ ಸೀರೆ ಕೊಂಡು ಕೊಡುತ್ತೀಯೋ ಇಲ್ಲವೊ ? " ಎಂದನು. ಅದಕ್ಕೆ ತಕ್ಕಂತೆ ಹೆಣ್ಣು ಕೋತಿ, ಗಂಡು ಕೋತಿಯ ಜೊತೆಯಲ್ಲಿ ತರ್ಕ ಮಾಡುವಂತೆ ಕುಣಿಯಿತು. ತಕ್ಷಣ ಕೋತಿ ಆಡಿಸುವವನು "ಕೊಂಡು ಕೊಡುವದಿಲ್ಲ ಹೋಗು !" ಎಂದು ಗಂಡು ಕೋತಿ ಉತ್ತರ ಹೇಳುವಂತೆ ಹೇಳಿದನು. ಅದಕ್ಕೆ ತಕ್ಕಂತೆ ಗಂಡು ಕೋತಿ, ಕೈಗಳನ್ನು ಆಡಿಸಿ ಕುಣಿಯಿತು. ಆನಂತರ ಹೆಣ್ಣುಕೋತಿ " ನಾನು ನಮ್ಮ ತಾಯಿಮನೆಗೆ ಹೋಗಿಬಿಡುತ್ತೇನೆ. ನೋಡು ! "ಎಂಬುವ ಭಾವನೆಯಿಂದ ಒಂದು ಗಂಟನ್ನು ಹೊತ್ತುಕೊಂಡು, ಒಂದು ಮೂಲೆಯಲ್ಲಿ ಹೋಗಿ ನಿಂತಿತು. ತಕ್ಷಣ ಗಂಡು ಕೋತಿ, ಆ ಹೆಣ್ಣು ಕೋತಿಯ ಹತ್ತರ ಹೋಗಿ ನಿಂತುಕೊಂಡು, "ಕೋಪಿಸಿಕೊಳ್ಳಬೇಡ ನಾನೇ ನಿನಗೆ ರೇಷ್ಮೆ ಸೀರೆ ಕೊಂಡು ಕೊಡುತ್ತೇನೆ !" ಎಂದು ಕೋತಿ ಆಡಿಸುವವನು ಮಾತಾಡುವದಕ್ಕೆ ತಕ್ಕಂತೆ, ಅದನ್ನು ಸಮಾಧಾನ ಮಾಡಲು ಪ್ರಯತ್ನಿಸಿತು. ಆಮೇಲೆ ಎರಡೂ ಕೋತಿಗಳು ಸೇರಿ ಒಟ್ಟಿಗೆ ಕುಣಿದವು.

ಈ ತಮಾಷೆ ಮುಗಿಯುತ್ತಲೂ, ರಘುರಾಮನು ಆ ಕೋತಿಯವನಿಗೆ ನಾಲ್ಕು ಆಣೆ ಬಿಸಾಟಿ, ಶಾರದೆಯನ್ನು ನೋಡಿ "ನೋಡಿದೆಯಾ ತಮಾಷೆಯನ್ನು ! .... ಕೋತಿಗಳಿಗೂ ಎಷ್ಟು ಬುದ್ಧಿ ಇದೆ! ... .... .... ಎಂದು" ಹೊಗಳಿದನು.

ಆಗ ಶಾರದೆಯು, " ನಿಜವೇ! ಅಷ್ಟು ಬುದ್ಧಿ ಮನುಷ್ಯನಿಗೆ ಎಲ್ಲಿದೆ !... ಹೆಣ್ಣು ಕೋತಿಯನ್ನು ಆ ಗಂಡುಕೋತಿ ಸಮಾಧಾನ ಮಾಡಿದ ಆ ದೃಶ್ಯವೊಂದು ಸಾಕಲ್ಲಾ ! " ಎಂದು ಹೇಳಿ ರಘುರಾಮನನ್ನು ನೆಟ್ಟ ದೃಷ್ಟಿಯಿಂದ ನೋಡಿದಳು.

ರಘುರಾಮನು ಹುಚ್ಚನೇ! ಅವಳ ಅರ್ಥವನ್ನು ತಕ್ಷಣದಲ್ಲಿಯೇ ಗ್ರಹಿಸಿಕೊಂಡನು. ಕೂಡಲೇ ತನ್ನ ಜೇಬಿನಿಂದ ೨೦೦ ರೂಪಾಯಿಗಳನ್ನು ಶಾರದೆಯ ಕೈಗೆ ಕೊಟ್ಟನು. ಅವು ಕೆಲವು ಗಂಟೆಗಳ ಕಾಲದಲ್ಲಿಯೇ ಜವಳಿ ಅಂಗಡಿಯವನ ಕೈಗೆ ಹೋದವೆಂದು ಬೇರೆ ಹೇಳಬೇಕಾಗಿಲ್ಲ?

ಮೇಲೆ ಹೇಳಿದಂತೆ, ಹೀಗೆ ಇದ್ದಕ್ಕಿದ್ದಂತೆ ತನಗೆ "ಶುಕ್ರಮಹರ್ದಶೆ" ಬರಲು ಕಾರಣೀಭೂತನಾದ ಆ ಕೋತಿಯಾಡಿಸುವವನಿಗೆ ಇನಾಮು ಕೊಡಲು ಶಾರದೆಯುಹಣಿಸಿದಳು ಆದರೆ ಅವನು ಎಲ್ಲಿಯೋ ಹೋಗಿ ಬಿಟ್ಟಿದ್ದನು.

## ಮೂರನೇ ಗುಂಡಿ

ಎಲ್ಲಾ ಕಣ್ಣು ಮುಚ್ಚಿ ಕಣ್ಣು ತೆಗೆಯುವುದರೊಳಗೆ ನಡೆಯಿತು. ಶೇಷಾಚಲ ಆಗಲೇ ನಗದಂಗಡಿಯ ಬೀದಿ ದಾಟಿ ಬರುತ್ತಿದ್ದನು. ಆದರ ಒಳಗಿನಿಂದ, ಒಬ್ಬ ಮನುಷ್ಯನು ತಲೆಬಿಟ್ಟುಕೊಂಡು ಓಡಿ ಬರುತ್ತಿದ್ದನು. ತನ್ನನ್ನು ಯಾರೂ ಗುರ್ತಿಸಬಾರದೆಂದು ಒಂದು ಬಟ್ಟೆಯನ್ನು ಮೂಗೂ ಬಾಯಿಗೂ ಸೇರಿಸಿ ಕಟ್ಟಿಕೊಂಡಿದ್ದನು. ಅವನ ಕೈಯಲಿದ್ದ ಸಣ್ಣ ಪೆಟ್ಟಿಗೆಯನ್ನು ನೋಡಿ, ಶೇಷಾಚಲನಿಗೆ ಸ್ವಲ್ಪ ಸಂಶಯವಾಯ್ತು. ಬಹುಶಃ ಇವನು ಕಳ್ಳನಿರಬಹುದೇ ಎಂದು, ಇನ್ನೊಂದು ಕ್ಷಣದಲ್ಲಿ ಆ ಸಂಶಯವು ದೃಢವಾಯಿತು.

"ಹಿಡಿ! ಹಿಡಿ! ಕಳ್ಳ! ನಗದ ಪೆಟ್ಟಿಗೆಯನ್ನು ತೆಗೆದುಕೊಂಡು ಓಡುತ್ತಿದ್ದಾನೆ! ಹಿಡಿ!" ಎಂದು ಕೂಗಿ ಅವನ ಹಿಂದೆಯೇ ಗುಮಾಸ್ತ ಮೊಲದಂತೆ ಓಡಿ ಬಂದನು.

ಶೇಷಾಚಲ ಸ್ಥಂಬಿಭೂತನಾಗಿ ನಿಂತನು. ಅವನ ಎದುರಿಗೆ ಅಂಗಡಿ ಗುಮಾಸ್ತನು ಕಳ್ಳನನ್ನು ಹಿಡಿದುಕೊಂಡನು. ಇಬ್ಬರ ಮಧ್ಯದಲ್ಲಿ ಒಂದು ಸಣ್ಣ ಮಲ್ಲಯುದ್ಧ ನಡೆಯಿತು. ಕಳ್ಳನಿಗೆ ನಾಲ್ಕು ಗುದ್ದುಗಳು ಬಿದ್ದವು; ಬದಲಿಗೆ ಕಳ್ಳನು ಹನ್ನೆರಡು ಗುದ್ದು ಗುಟ್ಟಿದನು. ಕೊನೆಯ ಹದಿಮೂರನೆಯ ಗುದ್ದಿಗೆ ಗುಮಾಸ್ತನು ಮೂರ್ಛಿತನಾಗಿ ಕೆಳಗೆ ಬಿದ್ದನು.

ಕೂಡಲೇ ಕಳ್ಳನು ಕೈ ಪೆಟ್ಟಿಗೆಯನ್ನು ತೆಗೆದುಕೊಂಡು ಹತ್ತಿರವಿದ್ದ ಬೈಸ್‌ಕಲ್ ಹತ್ತಿ, ಹಾರಿಹೋದನು. ಹಿಂದೆ ಕೂಡಿದ ಜನಗಳು ಕಳ್ಳ ಮರೆಯಾಗುವತನಕ ಅವನು ಹೋದ ದಾರಿಯನ್ನೇ ನೋಡುತ್ತಿದ್ದರೇ ಹೊರ್ತು ಯಾರೂ ಅವನನ್ನು ಹಿಡಿಯಲು ಯತ್ನಿಸಲಿಲ್ಲ. ಆ ಮೇಲೆ ಮೂರ್ಛಿತನಾದವನಿಗೆ ಶುಶ್ರೂಷೆ ಮಾಡಲು ಹೊರಟರು. ನಂತರ ಪೋಲೀಸ್‌ನವರು ಬಂದರು. ಯಾರೂ ಶೇಷಾಚಲನನ್ನು ಗಮನಿಸಲೂ ಇಲ್ಲ; ವಿವರಗಳನ್ನು ಕೇಳಲೂ ಇಲ್ಲ."

ಆದರೆ ಶೇಷಾಚಲನ ಹತ್ತಿರ ಆ ಕಳ್ಳನನ್ನು ಹಿಡಿಯಲು ಮುಖ್ಯವಾದ ಒಂದು ಗುರುತು ಸಿಕ್ಕಿದ್ದಿತು; ಅದು ದೇವರ ದಯದಿಂದ, ಯಾರಿಗೂ ಗೊತ್ತಾಗದೆ, ಅವನ ಕೈಲಿಸಿಕ್ಕಿತು.

ಕಳ್ಳನೂ ಗುಮಾಸ್ತನೂ, ಜಗಳವಾಡಿದರು. ಗುಮಾಸ್ತನ ಗುದ್ದು ಒಂದು, ಕಳ್ಳನ ಎದೆಯಮೇಲೆ ಬಿದ್ದು ಅವನ ಕೋಟಿನ ಪೂರನೇ ಗುಂಡಿ ನೇರವಾಗಿ ಮುರಿದು ಹೋಯ್ತು. ಒಂದು ಅರ್ಧ ಕೋಟಿನಲ್ಲಿದ್ದು ಇನ್ನೊಂದು ಗಾಳಿಯಲ್ಲಿ ಹಾರಿ ಬಂದು ಶೇಷಾಚಲನ ಕೈಲಿಬಿತ್ತು. ಅವನ್ನು ತೆಗೆದುಕೊಂಡು, ಯುದ್ಧದಲ್ಲಿ ಜಯಿಸಿದ ವೀರನಂತೆ ಮನೆಯದಾರಿ ಹಿಡಿದನು ಶೇಷಾಚಲ.

ಶೇಷಾಚಲನಿಗೆ ಜೀವನದಲ್ಲಿ ಜಿಗುಪ್ಸೆ ಹುಟ್ಟಲು ಅನೇಕ ಕಾರಣಗಳಿದ್ದವು ಅವನ ಬುದ್ಧಿ ಸಾಮರ್ಥ್ಯವನ್ನು ಕಂಡು, ಅವನಿಗೆ ಬಹುಮಾನ ಸಿಕ್ಕದಿರುವುದೇ ಕಾರಣ. ಅವನಿಗೆ ತಿಳಿಯದಿದ್ದ ವ್ಯಾಪಾರವಿಲ್ಲ; ಅವನು ಪ್ರಯತ್ನಿಸದಿದ್ದ ಕೆಲಸವಿಲ್ಲ. ಆದರೆ ಯಾವುದರಲ್ಲಿಯೂ ಅವನು ಜಯ ಹೊಂದಲಿಲ್ಲ. ಯಾವುದರಲ್ಲಿ ತನ್ನ ಅಭಿಪ್ರಾಯ ತಿಳಿಸಿದರೂ, 'ತಲೆಹರಟೆ' ಎಂದು ಅವನನ್ನು ಉದಾಸೀನ ಮಾಡುತ್ತಿದ್ದರು. ಕಿವಿಗೊಟ್ಟು ಕೇಳುವವರಿಲ್ಲ, ಅವನ ಮಗನೇ ಅವನನ್ನು ಲಕ್ಷ್ಯಮಾಡುತ್ತಿರಲಿಲ್ಲ; ಹಾಗಾದರೆ ನೆರೆಮನೆಯ ಇನ್ಸ್‌ಪೆಕ್ಟರ್ ದುರೈರಾಜನು ಲಕ್ಷ್ಯಮಾಡಲಿಲ್ಲವೆಂದ, ನೊಂದುಕೊಂಡರೆ ಏನು ಉಪಯೋಗ ?

ಇನ್ಸ್‌ಪೆಕ್ಟರ್ ದುರೈರಾಜನ ನಡತೆ ಶೇಷಾಚಲನಿಗೆ ಸ್ವಲ್ಪವೂ ಸರಿಬೀಳಲಿಲ್ಲ. ಆ ಮನುಷ್ಯ ನಮ್ಮ ಯೋಚನೆ ಕೇಳಿದರೆ, ಎಷ್ಟು ಸುಲ

ಭವಾಗಿ ಕೇಸ್‌ಗಳನ್ನು ಹಿಡಿಯಬಹುದು, ಎಂಬ ಯೋಚನೆ ಇದ್ದೇ ಇತ್ತು. ಆದ್ದರಿಂದ, ಈ ಸಲವೂ ಈ ಕೇಸ್‌ದಲ್ಲಿ ಅವರಿಗೆ ಕಳ್ಳನನ್ನು ಹಿಡಿಯಲು ಸಾಧ್ಯವೇ ಇಲ್ಲ ಎಣಿಸಿದನು. 'ಆಗಲಿ ಆಳನ್ನು ಸಿಕ್ಕಿಸುತ್ತೇನೆ' ಎಂದು ಕೊಳ್ಳುತ್ತ ಮನೆಗೆ ಬಂದನು.

ರಾತ್ರಿ ಒಂಬತ್ತು ಗಂಟೆ. ಶೇಷಾಚಲನ ಮಗ ಇನ್ನೂ ಮನೆಗೆ ಬಂದಿರ ಲಿಲ್ಲ. ಎಲ್ಲೆಲ್ಲಿ ಸುತ್ತಿ, ಹೇಗೆ ಹೊತ್ತು ಕಳಯುತ್ತಾನೋ! ಈಗ ಅವನು ಶೇಷಾಚಲನ ಮಾತು ಕೇಳುವುದಿಲ್ಲ. ಸಹವಾಸ ಚನ್ನಾಗಿಲ್ಲ.

ಶೇಷಾಚಲನು ದೀಪ ಮುಡಿಸಿ ಕುಳಿತುಕೊಂಡನು. ಜೇಬಿನಿಂದ, ಕರ ವಸ್ತ್ರದಲ್ಲಿ ಸುತ್ತಿ ತಂದಿದ್ದ ಅರ್ಧ ಗುಂಡಿಯನ್ನು ತೆಗೆದು ಮೇಜಿನ ಮೇಲಿ ಟ್ಟನು. ಎಷ್ಟು ಮುಖ್ಯವಾದ ಗುರ್ತು! ಊರಿನಲ್ಲಿರುವ ಅಗಸರಂಗಡಿಗಳಿಗೆ ಬರುವ ಕೋಟುಗಳನ್ನು ನೋಡಿದರೇನೇ ಸಾಕು; ಮೂರನೆ ಗುಂಡಿ ಒಡೆದಿ ರುವ ಕೋಟಿನ ಒಡೆಯನೇ ಕಳ್ಳನು! ಅವನು ಮುಖ ಮುಚ್ಚಿದ್ದರೇನು ಮುಚ್ಚದಿದ್ದರೇನು! ಈ ವಿಷಯ ಇನ್ಸ್‌ಪೆಕ್ಟರಿಗೆಲ್ಲಿ ಗೊತ್ತಾಗುತ್ತೆ!

ಪಕ್ಕದ ಮನೆಯಲ್ಲಿ 'ಬಾಂ ಬಾಂ' ಎಂದು ಒಂದು ಮೋಟಾರ್ ಶಬ್ದ ಕೇಳಿಸಿತು, ಬಗ್ಗಿ ನೋಡಿದನು ಶೇಷಾಚಲನು, ಇನ್ಸ್‌ಪೆಕ್ಟರರು ಗಾಡಿ ಇಳಿದು, ಜವಾನನ ಸಹಿತ ಮನೆಯ ಒಳಗೆ ಹೋಗುತ್ತಿದ್ದರು. ಶೇಷಾಚ ಲನು ಎದ್ದನು. ದುರ್ಯೈರಾಜನನ್ನು ಕಂಡು ಬಂದು ತನ್ನ ರೂಮಿಗೆ ಅವರನ್ನು ಕರೆದು ತಂದು ಇದನ್ನು ತೋರಿಸಬೇಕು. ತೋರಿಸಿಬಿಟ್ಟು, "ಏ ಅಹಂಕಾರದವನೆ! ಮುಖ್ಯವಾದ ಗುರುತು ಇಲ್ಲಿರುವಾಗ್ಗೆ ನೀನು ಎಲ್ಲೆಲ್ಲೋ ಹುಡುಕತ್ತಿಯಲ್ಲಾ? ಹೋಗು ಇದರ ಆಧಾರದ ಮೇಲೆ ಶೋಧ ಮಾಡು!" ಎಂದು ಅದನ್ನು ಕೊಡಬೇಕು. ಇದೇ ಅವನ ಆಸೆ.

ದುರ್ಯೈರಾಜನ ಮನೆಗೆ ನುಗ್ಗುವಾಗ, ಜವಾನ ತಡೆದನು. "ಯಾರಪ್ಪಾ ನೀನು! ಈಗ ಯಾರು ನೋಡಲು ಸಾಧ್ಯವಿಲ್ಲ ಸಾಹೇಬರನ್ನು! ಎಂದನು.

"ಯಾಕೆ ನೋಡಲಾಗುವುದಿಲ್ಲ?"

"ಮುಖ್ಯವಾದ ಕೇಸಿದೆ .... .... ಕೆಲಸದ ತೊಡಕಿನಲ್ಲಿದ್ದಾರೆ! ಹೋಗು ದೂರ!" ಎಂದು ಒಳಗೆ ಹೋಗುತ್ತಿದ್ದ ಶೇಷಾಚಲನನ್ನು ತಡೆದನು.

"ಸುಮ್ಮನೆ ಬಿಡಪ್ಪಾ, ಗೊತ್ತು! ಆ ವಿಷಯವಾಗಿಯೇ ಮುಖ್ಯವಾದ ಒಂದು ಮಾತನ್ನು ಹೇಳಲು ಬಂದಿದ್ದೇನೆ! ಜರುಗು ಹೋಗುತ್ತೇನೆ!" ಎಂದು ಗಟ್ಟಿಯಾಗಿ ಹೇಳಿದನು ಶೇಷಾಚಲನು.

ಇನ್ಸ್‌ಪೆಕ್ಟರರು ಬಗ್ಗಿ ನೋಡಿದರು. "ಯಾರದು?" ಎಂದು ಗದ್ದರಿಸಿದರು.

"ನಾನು, ಸಾರ್!"

"ಈಗ ನಿಮ್ಮ ಹತ್ತಿರ ಮಾತನಾಡಲು ಹೊತ್ತು ಇಲ್ಲ!"

"ಹಾಗೆ ಹೇಳಬಾರದು! ನೋಡುತ್ತಿರುವ ಕಳುವಿನಲ್ಲಿ ನನಗೆ ಕೆಲವು ವಿಷಯಗಳು ಗೊತ್ತುಂಟು 'ಫಸ್ಟ್ ಕ್ಲಾಸ್' ಗುರ್ತು ಒಂದಿದೆ. ನಿಮಗೆ ಇಷ್ಟವಾದರೆ ನನ್ನ ರೂಮಿಗೆ ಬನ್ನಿ!" ಎಂದನು ಶೇಷಾಚಲನು ಸ್ವಲ್ಪ ಹೊತ್ತೂ ನಿಲ್ಲದೆ ಮನೆಗೆ ಹೊರಟನು ಮನುಷ್ಯನೆಂದ ಮೇಲೆ ಮರ್ಯಾದೆ ಉಂಟಲ್ಲವೇ? ಬೇಕಾಗಿದ್ದರೆ ಅವರೇ ಬರಲಿ!

ಶೇಷಾಚಲ ನಿರೀಕ್ಷಿಸಿದ್ದು ವ್ಯರ್ಥವಾಗಲಿಲ್ಲ, ಐದೇ ನಿಮಿಷದಲ್ಲಿ ಬೂಟ್ಸ್‌ಶಬ್ದ ಕೇಳಿಸಿತು. ದೊರೈರಾಜರು, ಜವಾನನಸಹಿತ ಬಂದರು, ಏನು ಸಮಾಚಾರ? ಏಕೆ ಇಷ್ಟು ಹೊತ್ತು ಪೋಲೀಸಿಗೆ ಈ ಸಮಾಚಾರ ತಿಳಿಸಲಿಲ್ಲ? "ಎಂದು ಕೇಳುತ್ತಲೇ ಬಂದರು.

" ನಾನೇ ನಿಮ್ಮನ್ನು ಕರೆಸಿನಲ್ಲಾ! ನಾನು ಕರೆದೆ, ನೀವು ಬರುತ್ತೀರು ಏನಿ? ಇನ್ನು ಹೇಗೆ ಸಮಾಚಾರ ತಿಳಿಸುವುದು?

" ಅದಿರಲಿ.... ವಿಷಯವನ್ನು ಹೇಳಿ! ನನಗೆ ಗೊತ್ತಿಲ್ಲ!" ಎಂದು ಬಡಬಡಿಸಿದರು ದೊರೈರಾಜ್ .

ಅಂಗಡಿಗೆ ಖರೀದಿಗೆ ಹೋಗಿದ್ದೆ. ನಗದ ಅಂಗಡಿ ದಾಟುವಾಗ ಒಬ್ಬ ಮನುಷ್ಯನು ಓಡಿಬಂದನು. ಹಿಂದೆ ಬಂದ ಗುಮಾಸ್ತ ಜಗಳವಾಡಿದನು. ಮಲ್ಲಯುದ್ಧ ನಡೆಯಿತು. ಗುಂಡಿ ಅರ್ಧ ಹಾರಿಬಂದು ನನ್ನ ಕೈಯಲ್ಲಿಬಿತ್ತು. ಎಂದು ಎಲ್ಲಾ ವಿಷಯುವನ್ನೂ ಹೇಳಿದನು. "ಇಕೋ ಇಲ್ಲಿದೆ ಆ ಅರ್ಧ ಗುಂಡಿ. ಇದು ಒಂದನ್ನು ಇಟ್ಟುಕೊಂಡೇ, ಕಳ್ಳನನ್ನು ಹಿಡಿಯಬಹುದು, ಸಾರ್!" ಎಂದನು.

ಇನ್ಸ್‌ಪೆಕ್ಟರು ಗುಂಡಿಯನ್ನು ತೆಗೆದು ನೋಡಿದರು. ಅರ್ಧವಾಗಿ ಮುರಿದಿತ್ತು . "ಇದು ನನ್ನ ಹತ್ತಿರ ಇರಲಿ!" ಎಂದರು.

"ನನಗೇನು ಅಭ್ಯಂತರವಿಲ್ಲ. ಕೇಸ್ ಜಯವಾದರೆ ಖಂಡಿತವಾಗಿಯೂ ನನ್ನ ಹೆಸರನ್ನು ಪ್ರಕಟಣೆ ಮಾಡಬೇಕು. .... ಆಗ ಅದನ್ನು ಮರೆಯು ತ್ತೀರೋ ಏನೋ ?" ಎಂದರು ಶೇಷಾಚಲ.

"ಸರಿ! ಸರಿ! ತಲೆಹರಟೆಯಾಗಿ ಮಾತಾಡಬೇಡಿ!" ಎಂದರು ಇನ್ಸ್‌ಪೆಕ್ಟರರು.

ಇನ್ಸ್‌ಪೆಕ್ಟರ್ ಹೊರಡುವಾಗ್ಯೆ "ಹಲ್ಲೋ ಇನ್ಸ್‌ಪೆಕ್ಟಸಾಬ! ಏನು ಇಷ್ಟು ಅಪರೂಪ!" ಎಂದು ಹೇಳುತ್ತ ಬಂದನು ವಿಜಯಶಂಕರ್. ಶೇಷಾ ಚಲನ ಮಗನು. ಅವನು ಷೋಕ್ ಆದ್ದರಿಂದ, ಅವನು ಬರುತ್ತಲೂ ಅವನ ಕೋಣೆಯು ಗಮಗಮಿಸುತ್ತಿತ್ತು, ಇನಸ್ಪೆಕ್ಟರೂ ಬಂದರು.

"ಏನು ಇಲ್ಲ... ನಿಮ್ಮ ತಂದೆ ಹೇಳಿಕಳುಹಿಸಿದ್ದರು ಬಂದೆ.... ಎಲ್ಲಿ, ಸಿನಿಮಾ ಡ್ರಾಮಾ ನೋಡಿ, ಜೋರಾಗಿ ಬಂದಂತಿದೆ!" ಎಂದು ಕೇಳಿದರು ಸುರೈರಾಜ್.

ವಿಜಯಶಂಕರನು ತನ್ನ ಮೇಲೆ ಹೊದ್ದುಕೊಂಡಿದ್ದ ವಸ್ತ್ರವನ್ನು ಬಿಚ್ಚಿ ಒಂದು ಕರ್ಚಿಯ ಮೇಲೆ ಹಾಕಿದನು. "ಊಂ.... ಅತ್ತ ಹೋಗಲಿಲ್ಲ ಸುಮ್ಮನೆ ಅಡ್ಡಾಡಿ ಬಂದೆ.!" ಎಂದನು.

ಇನ್ಸ್‌ಪೆಕ್ಟರರ ಕಣ್ಣುಗಳು ವಿಜಯಶಂಕರನ ಕೋಟನ್ನು ದಿಟ್ಟಿಸಿ ನೋಡಿದವು. "ಹೀಗೆ ಬನ್ನಿ ಸರ್! ನಿಮ್ಮ ಕೋಟಿನ ಗುಂಡಿ ಪಡೆದಿರು ವಂತೆ ಕಾಣುತ್ತೆ!" ಎಂದು ಹತ್ತಿರ ಬಂದರು. ತಕ್ಷಣ ತಮ್ಮ ಕೈಯಲ್ಲಿದ್ದ ಅರ್ಧ ಗುಂಡಿಯನ್ನು ತೆಗೆದು, ಅವನ ಕೋಟಿನಲ್ಲಿದ್ದ ಅರ್ಧ ಗುಂಡಿಗೆ ಸೇರಿ ಸಿದರು. ಎರಡು ಗುಂಡುಗಳು ಒಂದಕ್ಕೊಂದು ಸರಿಯಾಗಿ ಸೇರುವುದನ್ನು ನೋಡಿ ಶೇಷಾಚಲ ನಡುಗಿದನು.

"ನೋಡಿಕೊಳ್ಳಿರಿ, ಶೇಷಾಚಲರೇ! ಕೋಟಿನಲ್ಲಿ ಮೂರನೇ ಗುಂಡಿ ಯೇ ಇದು' ಕೇಸ್ ಜಯಿಸುವಾಗ ನಿಮ್ಮ ಹೆಸರು ಬರತ್ತೋ ಇಲ್ಲವೋ

ಹೀಗೆ ನುಡಿದನು:—"ಏನು ಹೀಗೆ ಕೇಳಿದರೆ? ಒಬ್ಬ ಕಾರಕೂನನಲ್ಲಿ ಇಷ್ಟೇಕೆ ನಿನಗೆ ಆಸ್ಥೆ? ಅವನಿಗೂ ನಿನಗೂ ಏನು ಸಂಬಂಧ? ಇಂಥ ಪ್ರಶ್ನೆಗಳನ್ನು ಇನ್ನು ಮೇಲೆ ಕೇಳಬೇಡ. ಕೇಳಿದ್ದೇ ಆದರೆ ನಿನಗೆ ಯೋಗ್ಯ ಉತ್ತರ ಸಿಕ್ಕೀತು........ ಬಾಲೆಗೆ ಬಹಳ ವ್ಯಥೆಯಾಯಿತು. ಅಣ್ಣಂದಿರು ಏನಾದರೂ ತಿಳಿದುಕೊಂಡಾರೆಂಬ ಭೀತಿಯಿಂದ ಮುಂದೆ ಅವಳು ಯಾವ ಪ್ರಶ್ನೆಯನ್ನೂ ಕೇಳಲಿಲ್ಲ. ಆದರೆ ಲೊರೆಂರ್ಝೋನ ವಿಷಯಕ್ಕೆ ದಿನವೂ ಅವಳ ಮನವು ಕೊರಗತೊಡಗಿತು, ರಾತ್ರಿ ಮಲಗಿದಾಗ ಅವನನ್ನು ನೆನೆದು ಅಳುವಳು ಮರುಗುವಳು. ಎಷ್ಟೋ ಹೊತ್ತಿನಮೇಲೆ ನಿದ್ರೆ ಬರುವದು. ತಿಳಿಯದೆ ಹಾಗೆಯೇ ನಿದ್ರೆಹೋಗುವಳು.

ಹೀಗಿರಲಾಗಿ ಒಂದು ದಿನ ರಾತ್ರಿ ಲೊರೆಂರ್ಝೋನನ್ನು ಬಹಳ ನೆನಸಿ ಅವನು ಬರದೇ ಇದ್ದುದಕ್ಕಾಗಿ ಅತ್ತು• ಮಲಗಿದಳು. ಅಗ ಅವಳೊಂದು ಕನಸು ಕಂಡಳು. ಲೊರೆಂರ್ಝೋ ಅವಳೆದುರು ನಿಂತಿದ್ದಾನೆ. ಬಹಳ ದಣಿದು ಸೋತಿದ್ದಾನೆ. ನಿಸ್ತೇಜನಾಗಿದ್ದಾನೆ. ಮೈಮೇಲಿನ ಬಟ್ಟೆಗಳೆಲ್ಲವೂ ಹರಿದು ಹೋಗಿವೆ. ಬಹುನೊತ್ತಗಿನ ಸ್ವರದಲ್ಲಿ ನುಡಿದನು:—"ಲಿಸಬೆಟಾ! ನನ್ನನ್ನು ನೀನು ಕರೆಯಬೇಡ. ನನಗಾಗಿ ದುಃಖಿಸಬೇಡ. ಇನ್ನು ನಾನು ನಿನ್ನಡೆಗೆ ಬರಲಾರೆ, ನಿನ್ನ ಬಂಧುಗಳ ಸಂಗಡ ನಾನು 'ಮೋಜ'ಗಾಗಿ ಶಹರಕ್ಕೆ ಹೊರಟಾಗ ದಾರಿಯಲ್ಲಿ ಅವರು ನನ್ನನ್ನು ಕೊಂದು ಬಿಟ್ಟರು"............ಆ ಮೇಲೆ ಅವರು ತನ್ನನ್ನು ಹುಗಿದ ಸ್ಥಳವನ್ನು ಹೇಳಿದನು. ತನ್ನ ಆಶೆಯನು ಪೂರ್ಣ ಬಿಡಬೇಕೆಂದು ಮತ್ತೊಮ್ಮೆ ಹೇಳಿ ಮಾಯವಾದನು. ಹುಡಿಗಿಗ್ಗೆ ಎಚ್ಚರವಾಯಿತು. ಇದು ಕನಸೆಂದು ಅವಳಿಗೆ ಅನಿಸಲೇ ಇಲ್ಲ. ಪ್ರತ್ಯಕ್ಷ ಅವನೇ ಬಂದಿದ್ದನೆಂದು ತಿಳಿದು ಅಳಹತ್ತಿದಳು. ಮುಂಜಾನೆಯಾಯಿತು. ಹಾಸಿಗೆಯಿಂದೆದ್ದಳು. ತನ್ನ ಕನಸಿನ ವಿಷಯವನ್ನು ತನ್ನ ಬಂಧುಗಳಿಗೆ ಅವಳು ಹೇಳಲೇ ಇಲ್ಲ.

ಕೆಲದಿನಗಳು ಕಳೆದ ಬಳಿಕ ಒಂದು ದಿನ ತಾನು ತನ್ನ ಮನದ ಬೇಜಾರನ್ನು ಕಳೆಯಲೋಸುಗ ಶಹರಕ್ಕೆ ಹೋಗುವೆನೆಂದು ತನ್ನ ಬಂಧುಗಳಿಗೆ

ಹೇಳಿದಳು. ತನ್ನ ಬಾಲ್ಯ ಗೆಳತಿಯೋರ್ವಳು ತನ್ನ ಸಂಗಡ ಬರುವಳಾದು ದರಿಂದ ತನಗೆ ಯಾವ ತೊಂದರೆಯೂ ಇಲ್ಲವೆಂದು ನುಡಿದಳು. ಬಂಧುಗಳು ಒಪ್ಪಿಗೆಯನ್ನಿತ್ತರು, ಗೆಳತಿಗೆ ಲಿಸಬೆಟ್ಟಾಳ ಪ್ರಣಯ ವ್ಯವಹಾರವೆಲ್ಲವೂ ಗೊತ್ತಿತ್ತು. ಇಬ್ಬರೂ ನೇರವಾಗಿ ಲೊರೆಂಝೋನನ್ನು ಹುಗಿದ ಸ್ಥಳಕ್ಕೆ ಹೋದರು. ಹುಗಿದದ್ದು ಗೊತ್ತಾಗಬಾರದೆಂದು ಒಣಗಿದ ಎಲೆಗಳನ್ನು ಅಲ್ಲಿ ಎಸೆದಿದ್ದರು. ಅವನ್ನು ತೆಗೆದು ಲಿಸಬೆಟ್ಟಾಳು ಆ ಸ್ಥಳವನ್ನು ಅಗಿಯ ತೊಡಗಿದಳು. ತುಸು ಅಗಿಯುವದರಲ್ಲಿಯೇ ತನ್ನ ಪ್ರಿಯನ ಶವವು ಅವಳ ಕೈಗೆಹತ್ತಿತು. ಅದನ್ನು ಹೊರಗೆ ತೆಗೆದಳು. ಲೊರೆಂಝೋನನ್ನು ಈಗ ಹುಗಿದಿರುವರೋ ಎಂಬಂತೆ ಆ ದೇಹವಿದ್ದಿತು. ತಾನು ಕಂಡುದು ಕನಸಲ್ಲ ನಿಜವೆಂದು ಆಗ ಅವಳಿಗೆನಿಸಿತು. ದುರ್ದೈವಿಯು ಬಹಳ ಅತ್ತಳು. ತನ್ನ ಪ್ರಿಯನ ಶವಕ್ಕೆ ಸರಿಯಾದ ಸಂಸ್ಕಾರವಾಗಿಲ್ಲವೆಂದು ಬೆಂದಳು. ಆದರೆ ಅದನ್ನು ತಾನು ಈಗ ಮಾಡಲು ಶಕ್ಯವಿಲ್ಲ. ಆದುದರಿಂದ ತಾನು ತಂದ ಚೂರಿಯಿಂದ ಅವನ ಕುತ್ತಿಗೆಯನ್ನು ಕೊಯ್ದು ರುಂಡವನ್ನು ಅರಿವೆ ಯಲ್ಲಿ ಮುಚ್ಚಿ ಕಟ್ಟಿದಳು. ಧಡವನ್ನು ಪುನಃ ಅದೇ ಸ್ಥಳದಲ್ಲಿ ಹುಗಿದ್ದು ರುಂಡದ ಗಂಟನ್ನು ಬಗಲಲ್ಲಿರಿಸಿ ಯಾರಿಗೂ ಕಾಣದಂತೆ ತನ್ನ ಗೆಳತಿಯ್ಯ ಸಂಗಡ ಮನೆಯ ದಾರಿಹಿಡಿದಳು. ತನ್ನ ಕೋಣೆಗೆ ಧಾವಿಸಿಬಂದು ಬಾಗಿ ಲನ್ನು ಮುಚ್ಚಿ ಲೊರೆಂಝೋನ ರುಂಡವನ್ನು ತನ್ನ ತೊಡೆಯ ಮೇಲಿಟ್ಟು ಕೊಂಡು ಅಳಹತ್ತಿದಳು. ಬಹಳ ಅತ್ತಳು. ಕಣ್ಣೀರಿನಿಂದ ಆ ರುಂಡವನ್ನು ತೋಯಿಸಿ ಬಿಟ್ಟಳು. ಆ ಮೇಲೆ ಒಳ್ಳೇ ಶುಭ್ರವಾದ ಅರಿವೆಯಲ್ಲಿ ಆ ರುಂಡವನ್ನು ಕಟ್ಟಿ ಅದನ್ನು ಪಂಚಲೋಹದ ಕುಂಡೆಯಲ್ಲಿ ಇಟ್ಟಳು. ಮಣ್ಣಿ ನಿಂದ ಮುಚ್ಚಿದಳು; ಕಾಮುಕಸ್ತೂರಿಯ ಸಸಿಯೊಂದನ್ನು ಅದರಲ್ಲಿ ನೆಟ್ಟಳು. ಲೆವ್ಹೆಂಡರ ವಾಟರನ್ನೂ ಗುಲಾಬೀ ನೀರನ್ನೂ ಮತ್ತು ಕಣ್ಣೀರನ್ನೂ ಹಣಿಸಿ ಅದನ್ನು ಬೆಳೆಸತೊಡಗಿದಳು.

ಈ ರೀತಿ ಬಹಳ ದಕ್ಷತೆಯಿಂದ ಆ ಸಸಿಯು ಬೆಳೆಯಿಸಲ್ಪಟ್ಟಿತು. ಮಣ್ಣಿನಲ್ಲಿದ್ದ ರುಂಡದಿಂದ ಉತ್ತಮ ಗೊಬ್ಬರವಾದುದರಿಂದ ಅದರ ಬೆಳವಣಿ ಗೆಗೆ ಬಹಳ ಪುಷ್ಟಿಸಿಕ್ಕಿತು. ಕಾಮುಕಸ್ತೂರಿಯ ವಾಸನೆಯು ಇಡಿಯ್ಯ ಓಣಿಯ ತುಂಬೆಲ್ಲ ಹರಡಿಹೋಯಿತು. ನೆರೆಹೊರೆಯವರು ಈ ಗಿಡವನ್ನು

ನೋಡಿದರು. ಇದನ್ನು ಬೆಳೆಯಿಸುವ ರೀತಿಯನ್ನೂ ಅವರು ಕದ್ದು ನೋಡಿದರು. ಅವಳ ಬಂಧುಗಳಿಗೆ ಇದನ್ನು ಹೇಳಿದರು, ಬಂಧುಗಳು ಆಗ ಅವಳನ್ನು ಲಕ್ಷ್ಯಪೂರ್ವಕವಾಗಿ ನೋಡಿದರು. ಅತ್ತು ಅತ್ತು ಅವಳ ಕಣ್ಣುಗಳು ಊದಿ ಕೊಂಡಿದ್ದವು. ಗಲ್ಲಗಳು ಪಚ್ಚು ಬಿದ್ದಿದ್ದವು; ಅವಳ ಲಾವಣ್ಯವೆ ಬಾಡಿಹೋಗಿದ್ದಿತು. 'ಅತ್ತು ಅತ್ತು ಕಣ್ಣೀರು ಸುರಿದು ಈ ಗಿಡವನ್ನು ಬೆಳೆಸುವದೇ ಇವಳ ದಿನಚರಿಯಾಗಿದೆಯಲ್ಲವೇ? ಎಂದು ಮನದಲ್ಲಿ ಬಂಧುಗಳು ಅಂದುಕೊಂಡರು. ಈ ರೀತಿ ಅಳುವದು ತರವಲ್ಲವೆಂದು ಅವರು ಲಿಸಜೆಟಾಳಿಗೆ ಬೆದರಿಸಿದರು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಕಡೆಗೆ ಉಪಾಯಕಾಣದೆ ಅವಳಿಲ್ಲದ ವೇಳೆ ನೋಡಿ ಕಾಮುಕಸ್ತೂರಿಯ ಕುಂಡೆಯನ್ನು ಪೊತ್ತು ಬಿಟ್ಟರು. ಲಿಸಜೆಟಾಳು ಆ ಕುಂಡೆಯನ್ನು ತನಗೆ ವಾಪಸು ಕೊಡಿರೆಂದು ತನ್ನ ಬಂಧುಗಳನ್ನು ಕೇಳಿದಳು, ಕಾಡಿದಳು, ಬೇಡಿದಳು, ಹಟಮಾಡಿದಳು, ಬೆದರಿಸಿದಳು, ಅತ್ತಳು. ಎಲ್ಲವೂ ವ್ಯರ್ಥವಾಯಿತು. ಅವರು ಅದನ್ನು ಅವಳಿಗೆ ಕೊಡಲೇ ಇಲ್ಲ. ಆಗ ಅವಳ ಅಳುವು ನಿಂತಿತು. ನಿರಾಶರಾಗಿ ಹತಾಶಳಾದಳು. ಎದೆಯೊಡೆದು ಕೊಂಡಳು. ಹಾಸಿಗೆ ಹಿಡಿದಳು. ಜ್ವರದಿಂದ ಪೀಡಿತಳಾಗಿ ಬಡಬಡಿಸಹತ್ತಿದಳು. ಅದೂ ಸಹ ಇಷ್ಟೇ, 'ಕಾಮುಕಸ್ತೂರಿಯ ಕುಂಡೆಯನ್ನು ನನಗೆ ಕೊಡಿರಿ' ಎಂದಿಷ್ಟೇ ಬಡಬಡಿಸುವಳು. ಆ ಗಿಡದ ಸಲುವಾಗಿ ಇವಳು ಇಷ್ಟು ಬೇಡಬೇಕಾದರೆ ಅದರಲ್ಲಿ ಇರುವದಾದರೂ ಏನು? ಎಂಬ ಕುತೂಹಲವು ಬಂಧುಗಳಲ್ಲಿ ಉತ್ಪನ್ನವಾಯಿತು. ಕುಂಡೆಯಲ್ಲಿಯ ಗಿಡವನ್ನು ಕಿತ್ತಿದರು. ಮಣ್ಣನ್ನು ಎಬ್ಬಿದರು. ಒಳಗೆ ಬಿಳೀ ಅರಿವೆಯಿಂದ ಸುತ್ತಿದ ರುಂಡವೊಂದು ಇದ್ದಿತು. ಮುಖದ ಮೇಲಿನ ವರ್ಣವೇನೂ ಅಳಿದಿರಲಿಲ್ಲವಾದುದರಿಂದ ಅದು ಲೊರೆಂಝೋನ ರುಂಡವೆಂದು ಎಲ್ಲರೂ ಗುರುತಿಸಿದರು. ತಾವು ಲೊರೆಂಝೋನನ್ನು ಕೊಂದ ಸುದ್ದಿಯು ಊರಲ್ಲಿ ಹಬ್ಬುವದೆಂದು ಅವರು ಬಹಳ ಅಂಜಿದರು. ಆಗಿಂದಾಗಲೇ ಆ ರುಂಡವನ್ನು ಬೇರೆ ಕಡೆಗೆ ಒಯ್ದು ಯಾರಿಗೂ ತಿಳಿಯದಂತೆ ಹುಗಿದು ಬಿಟ್ಟರು. ತಮ್ಮ ಊರಾದ ಮೆಸಿನಾವನ್ನು ಬಿಟ್ಟು ನೇಪಲ್ಸಕ್ಕೆ ಓಡಿದರು. ಹುಡುಗಿಯು ಮಾತ್ರ ಹಾಸಿಗೆಯನ್ನು ಬಿಟ್ಟು ಏಳಲೇ ಇಲ್ಲ.

# ಹೆರವರ ವಿಲಾಸ

ನಮ್ಮ ಜೀವನದ ಸೊಬಗು ನಮಗೆ ಯಾವಾಗಲೂ ಸುಖವೀಯುವ ದೆಂದು ಅನಿಸುವದಿಲ್ಲ. ಅದೇಕೆ ಒಮ್ಮೊಮ್ಮೆ ಅದು ಬಹಳ ಬೇಜಾರಾಗಿ ಬಿಡಬಹುದು. ಆದರೆ ಹೆರವರ ಜೀವನದ ಸೊಬಗು ಮತ್ತು ಅವರ ದಾಂಪತ್ಯ ಜೀವನದ ನೋಟಗಳು ನಮಗೆ ಕುತೂಹಲವನ್ನುಂಟುಮಾಡುವವು. ಅದನ್ನು ನೋಡಿದರೆ ಮನಕ್ಕೆ ಆನಂದವೂ ಆಗುವದು. ಹೆರವರ ಜೀವನದ ರೀತಿಯನ್ನು ಅಥವಾ ಸೊಬಗನ್ನು ನೋಡಿ ನಮ್ಮ ಜೀವನವನ್ನೂ ಆ ರೀತಿ ಯಲ್ಲಿಡಬೇಕೆಂಬ ಆಶೆಯಿಂದ ನಾವು ಜೀವಿಸಬಹುದು. ಈ ರೀತಿ ನಮ್ಮ ಸುತ್ತಲಿನ ಜನಗತ್ತಿನಲ್ಲಿಯ ವಿಲಾಸವನ್ನು ನೋಡುವ ಕಲೆಯನ್ನು ನಾವು ಕಲಿತುಕೊಂಡರೆ ನಾವು ನಮ್ಮ ಜೀವನದಲ್ಲಿ ಕೂಡ ಕಲೆ ಮತ್ತು ಸುಖಗಳನ್ನು ತಂದುಕೊಳ್ಳಬಹುದು. ಇದೇ ಬಾಳಿನಲ್ಲಿ ಕಾಣಬಹುದಾದ ವಿಲಾಸ, ಅಥವಾ ಸುಖ. ಹಚ್ಚಗೆ ಹಸರು ಬಣ್ಣದಿಂದಿರುವ ಗಿಡಗಳಿಂದ ಮುಸುಕಿದ ದೂರಿನ ಗುಡ್ಡ ಅಥವಾ ಅಂಥ ಗಿಡಗಳ ಛಾಯೆಯಿಂದ ಕಂಗೊಳಿಸುವ ತೆಗ್ಗಿನಲ್ಲಿಯ ಝರಿಗಳು ಎಷ್ಟು ಸುಂದರವಾಗಿ ಕಾಣುವವು ! ಮನಕ್ಕೆ ಎಷ್ಟು ಆಲ್ಹಾದ ಪನ್ನೀವವು ! ರೀತಿಯಲ್ಲಿ ಹೆರವರ ಜೀವನದ ಏರಿಳಿತಗಳು ನೋಡುವವರಿಗೆ ಆವರವರ ಮನೋಗತಿಗನುಗುಣವಾಗಿ ಶಾಂತಿಯನ್ನೀಯುವವು.

ನನಗಂತೂ ಹೆರವರ ಜೀವನದ ರೀತಿ, ವಿಲಾಸ, ಸೊಬಗನ್ನು ನೋಡಿ ನಲಿಯಬೇಕೆಂದೆನಿಸುವದು. ನನಗೆ ಬಹಳೇ ಬೇಜಾರವೆನಿಸಿದಾಗ, ಅಥವಾ ನನ್ನ ಬಾಳು ಬರೀ ಪೊಳ್ಳು ಎಂದು ಹತಾಶನಾದಾಗ ನಾನು ನನ್ನ ನೆರೆಹೊರೆ ಯವರನ್ನು ನೋಡುವೆನು. ಅವರ ಬಾಳನ್ನು ಅವಲೋಕಿಸುವೆನು. ಅವರ ಉಲ್ಹಾಸದಲ್ಲಿ ನಾನೂ ಸಹಭಾಗಿಯಾಗಲು ಯತ್ನಿಸುವೆನು.

ನಾನು ಸಾಹಿತಿಯಲ್ಲ, ಕಲೆಗಾರನೂ ಅಲ್ಲ. ಹಾಗಿರುವವರು ಅತಿಸ್ವಲ್ಪ ಜನರು. ಇರಲಿ, ಕೆಲ ದಿನಗಳ ಹಿಂದೆ ನನಗೊಂದು ಬಹುರಮ್ಯವಾದ ಪ್ರಣಯ ಸನ್ನಿವೇಶವು ಗೋಚರಿಸಿತು. ಆದರೆ ಅದರಲ್ಲಿ ನಾನು ಜಯಶೀಲ ನಾಗಲಿಲ್ಲ. ನನ್ನದೇ ತಪ್ಪು, ಎಂದು ಅನ್ನಬಹುದು.

ಒಂದಾನೊಂದು ಅಂಗಡಿಯಲ್ಲಿ ಒಬ್ಬ ಹುಡಿಗಿಯಿದ್ದಳು. ಬಹಳ ಚಲುವಾದ ಹುಡುಗಿ, ಬಿಳಿಯಮುಖ. ಕೆಂಪು ತುಟಿಗಳು. ತುಟಿಗಳಿಗೆ ಕವಿಗಳು ಗುಲಾಬಿ ಹೂವಿನ ಪಕಳೆಗಳ ಸಾಮ್ಯವನ್ನು ಕೊಡುವರು......ಅದೇನೂ ಸುಳ್ಳಲ್ಲ; ಆ ತುಟಿಗಳು ಪಕಳೆಗಳಷ್ಟೇ ಮೋಹಕವಾಗಿರುವವು. ಪ್ರತಿಯೊಬ್ಬ ಸ್ತ್ರೀಯಳ ತುಟಿಗಳೂ ಹಾಗೆಯೇ ಕೆಲವು ಪಕಳೆಗಳು ಮುಂಜಾವಿನ ಎಳೆಯ ಕೆಂಪನ್ನೀಯುವವು. ಕೆಲವು ಮಧ್ಯಾಹ್ನದ ಬಿಸಿಲಿನ ವಾತಾವರಣದ ಗಾಂಬೀರ್ಯದಿಂದ ಮೆರೆಯುವವು. ಸಂಜೆಗೆ ಇಳಿದು ಹೋದ ಪಕಳೆಗಳೂ ಕೆಲವುಂಟು, ಆದರೆ ಅವು ಮಾತ್ರ ನನಗೆ ಬೇಡ.

ಇರಲಿ ಅವಳ ತುಟಿಗಳು ಮಾತ್ರ ಮುಂಜಾವಿನ ಎಳೆಯ ಕೆಂಪನ್ನೀಯುವಂಥವು. ಅವಳು ನನಗೆ ಈಗ "ಮಾಣಿ" † ಯಾಗಿನಿಂತಿದ್ದಾಳೆ. ಅವಳ ತುಟಿಗಳು ಮೆಲ್ಲನೆ ನುಡಿದವು. ದೇಹಚನೆಯು ಸೂಚಿಸಿತು. ನೋಟವು ಯಾಚಿಸಿತು. "ರಾಯರೇ, ತಮಗೆ ಏನು ಬೇಕು?" ಎಂದು. ಆಗ ನನಗೆ ಎಚ್ಚರಿಕೆಯಾಯಿತು. ಇವಳು ನನ್ನೆದುರು ಈಗ ಮಾಣಿಯಾಗಿ ನಿಂತಿದ್ದಾಳೆ ಎಂದು "ಅಂ" ಎಂದನು.

ನಾನು ಅನೇಕ ಸಲ ಅವಳ ಸಂಗಡ ಮಾತಾಡಿದ್ದೇನೆ ಅವಳ ಆರೋಗ್ಯದ ವಿಷಯವಾಗಿ ಕೇಳಿದ್ದೇನೆ. ಅವಳಿಗೆ ವಾರದಲ್ಲಿ ಒಂದು ದಿನ ರಜೆಯಿರುವದು. ಆ ರಜೆಯ ದಿನದಲ್ಲಿ ಬಹುಭಾಗ ನನ್ನ ಸಂಗಡ ಅವಳು ಕಳೆಯಬೇಕೆಂಬ ಇಚ್ಛೆಯಿಂದ ಏನೇನೋ ಅವಳ ಸಂಗಡ ಹರಟುತ್ತಿರುವೆನು. ಅವಳ ಪ್ರಣಯ ಜೀವನವನ್ನು ತಿಳಿಯಲು ಹವಣಿಸುವೆನು.
ಒಂದು ದಿನ ನಾನು ಧೈರ್ಯ ತಂದುಕೊಂಡು ಒಮ್ಮೆ ಕೇಳಿ ಬಿಟ್ಟೆನು " ನಿನ್ನ ಭಾವ ಚಿತ್ರವನ್ನು ನನಗೆ ಕೊಡು " ಎಂದು.

ಆಗ ಅವಳು ಒಯ್ಯುತ್ತಿರುವ ಕಪ್ಪು ಬಸಿಗಳು ಅವಳ ಕೈಜಾರಿ ಬೀಳುವವೇನೋ ಎಂಬಂತೆ ಭಾಸವಾಯಿತು. ನಾನೂ ಕಂಪಿಸತೊಡಗಿದೆನು,

---

† ಚಹದ ಅಂಗಡಿಯಲ್ಲಿ ಚಹ ಉಪಹಾರಗಳನ್ನು ನೀಡುವ ಹುಡುಗ ಅಥವಾ ಹುಡುಗಿ?

ಟೇಬಲ್ಲ ಬದಿಗೆಬಾಗಿ ಮೆಲ್ಲಗೆ ಧೈರ್ಯದಿಂದ ಉಸುರಿದಳು. "ಹಿಂದೆ ಒಮ್ಮೆ ನಾನು ಫೋಟೋ ತೆಗೆಸಿಕೊಂಡಿದ್ದೆ....ಸಂಜೆಯ ಉಡುಪಿನಲ್ಲಿ ತೆಗೆಸಿದ್ದೆನು. ನನ್ನಲ್ಲಿ ಈಗ ಒಂದೂ ಪ್ರತಿ ಉಳಿದಿಲ್ಲ ಒಂದೇ ಒಂದು ಉಳಿದಿತ್ತು. ಅದನ್ನು ನನ್ನ ಅಕ್ಕಂದಿರು ಅವಸಾನ ಕಾಲದಲ್ಲಿದ್ದಾಗ ಅಕ್ಕಿಗೆ ಕಳಿಸಿಬಿಟ್ಟರು.

"ಇದರಿಂದ ನಿಮ್ಮ ಅಕ್ಕಿಗೆ ತುಸು ಸಮಾಧಾನವಾಗಿರಬೇಕು!" ಇದು ಬಹಳ ಅಸಂಬದ್ಧ ಮತ್ತು ಅಸ್ವಾಭಾವಿಕವಾದ ಪ್ರಶ್ನೆಯೆಂಬುದು ಆಗಲೇ ನನಗೆ ಗೊತ್ತಾಯಿತು. ನಾನೇನು ಮಾತಾಡುತ್ತಿರುವೆನೆಂಬುದು ನನಗೆ ತಿಳಿಯದ ಸ್ಥಿತಿಯಲ್ಲಿ ನಾನಿದ್ದೆನು. ನಾನೊಳ್ಳೇ ಕುಶಲಮಾತುಗಾರನಿರುವೆನೆಂದು ಅವಳು ತಿಳಿದುಕೊಳ್ಳಬೇಕೆಂದು ಪ್ರಯತ್ನಿಸುತ್ತಿದ್ದೆನು.

ಆದರೆ ಅದು ವ್ಯರ್ಥವಾಯಿತೆನ್ನಬಹುದು. ಅವಳ (ಬೆಕ್ಕಿನ) ಕಣ್ಣಿನಿಂದ ಹೊರಟ ಕಿರಣವು ನನ್ನ ಮೊಗದ ಮೇಲೆ ತುಸು ಹೊತ್ತು ಬಿದ್ದಿತು "ಅಕ್ಕಿಯು ಸಹ ಹದಿನೈದೇ ದಿನಗಳಲ್ಲಿ ಸತ್ತುಹೋದಳು"

ನಾನು ಹುಚ್ಚನಾದೆನು. ಮುಂದೇನು ಮಾತಾಡಬೇಕೆಂಬುದು ತೋರಲೇ ಇಲ್ಲ. ವಾತಾವರಣವನ್ನು ಸುಧಾರಿಸಲು ಅತ್ತಿತ್ತ ನೋಡತೊಡಗಿದೆನು. ಕಾಲರ ಗುಂಡಿಯನ್ನು ಹಿಡಿದು ಖ್ಯಾಕರಿಸಿ ಧ್ವನಿಯನ್ನು ನೆಟ್ಟಗೆ ಮಾಡಿಕೊಂಡೆನು. "ಅಂ....ಇನ್ನೊಮ್ಮೆ ನಿನ್ನ ಫೋಟೋ ತೆಗೆಸುವಿಯೇನು? ಅವರ ವೆಚ್ಚವನ್ನು ನಾನು ಕೊಡುವೆನು."

ಆಶ್ಚರ್ಯ ಮತ್ತು ಆನಂದಗಳನ್ನು ಅವಳ ನೋಟವು ಬೀರಿತು. ತನ್ನ ಹಸ್ತವನ್ನು ತಾನೇ ಹಿಚುಕಿಕೊಂಡಳು. "ಆಗಲಿ ಅಗತ್ಯವಾಗಿ ಆಗಲಿ"

ಅಂದರೆ ಒಂದು ಪ್ರತಿ ನನಗೆ ಕೊಡು ನಾನು ಉದ್ದೇಶ ಪೂರ್ವಕವಾಗಿಯೇ ನುಡಿದೆನು "ಇನ್ನೊಂದು ನಿನ್ನ ಪ್ರಿಯನಿಗೆ ಕೊಡಬಹುದು...."

ಆಶ್ಚರ್ಯದಿಂದ ನನ್ನನ್ನು ನೋಡತೊಡಗಿದಳು. ಕಮಾನಿನಂತೆ ಬಾಗುವ ಹಾಗೆ ಹುಬ್ಬುಗಳನ್ನು ಏರಿಸಿದಳು.

"ನಿನಗೆ ಹೇಗೆ ಗೊತ್ತಾಯಿತು?" ಅವಳ ತುಟಿಗಳು ಮೆಲ್ಲನೆ ಅಲೆದಾಡಿದವು.

"ನಿನ್ನ ಕಣ್ಣುಗಳಲ್ಲಿ ಅವನ ಬಿಂಬವು ಮೂಡಿದೆ....ಅವನ ವೃತ್ತಾಂತ ವನ್ನು ನನಗಷ್ಟು ಹೇಳುವಿಯಾ ?

ಅವಳ ಮುದ್ದು ಮೊಗವನ್ನು ನಾಚಿಕೆಯು ಆವರಿಸಿತು. ಅತ್ತ ಮುಖ ತಿರುವಿದಳು "ಈಗ ಬೇಡ...."ಆದರೂ ಈಗಲೇ ಹೇಳಬೇಕು ಎನ್ನುವ ಭಾವವು ಅವಳಲ್ಲಿ ಮೂಡಿತು. ದೇಹದ ವೈಯಾರದಿಂದ, ನೋಟದ ಕುಣಿತದಿಂದ, ಗಲ್ಲದಲ್ಲಿಯ ಗುಲಾಬೀ ಬಣ್ಣದ ಏರಿಳಿತನಿಂದ, ನಾನು ತಿಳಿದುಕೊಂಡೆನು.

" ಹಾಗದರೆ ಎಂದು ಹೇಳುವಿ ?"

" ಎಂದಾದರೂ....'

" ನಾಳಿನ ಆದಿತ್ಯವಾರ ?"

" ನಾಳಿನ ಆದಿತ್ಯವಾರ ನಾವೆಲ್ಲರೂ ಎಪಿಂಗಕ್ಕೆ ಹೋಗುವವರಿದ್ದೇವೆ.... "

" ಹೀಗೇನು ? ಹಾಗಾದರೆ ಮುಂದಿನ ಆದಿತ್ಯವಾರ ?"

" ಆದಿನ ಅವನಿಗೆ ಕೆಲಸವಿದೆ !"

" ಆದರೂ ಮುಂದಿನ ಆದಿತ್ಯವಾರ ನಿನಗೆ ಬಿಡುವಿರಲೇಬೇಕು "

" ಹೌದು "

"ಒಳ್ಳೇದು, ಕ್ಯೂ ತೋಟಕ್ಕೆ ಹೋಗೋಣ. ಪುಕ್ಕಟೆಯಾಗಿ ಅಲ್ಲಿ ಒಳಗೆ ಎಲ್ಲರನ್ನೂ ಬಿಡುವರು. ಅಲ್ಲಿ ಹೋಗೋಣ. ಅವನ ವಿಷಯವನ್ನು ನನಗೆ ಹೇಳು ಮರೆಯಬೇಡ. ಅಂದಿನ ಆದಿತ್ಯವಾರ ೩ ಘಂಟೆಗೆ ಚೇರಿಂಗ ಕ್ರಾಸದ ನೆಲಮನೆಯಲ್ಲಿ ಸೇರೋಣ. ಅವನಿಗೂ ಬರಲು ಹೇಳು ನಾನೂ ಬರುವೆನೆಂದು ಹೇಳು. ಅವಳು ಬಹಳ ಉತ್ಸಾಹದಿಂದ ಜಾರಿದಳು. ನಲಿದಾಡುತ್ತ ಕಣ್ಮರೆಯಾದಳು.

ಆ ಆದಿತ್ಯವಾರ ಬರಬೇಕಾದರೆ ನಾನು ಎಷ್ಟು ಕಾಯಬೇಕಾಯಿತು ! ವೇಳೆ ಕಳೆಯುವದೇ ಕಷ್ಟವಾಗಿ ಹೋಯಿತು. ಆ ಆದಿತ್ಯವಾರ ಹೋದ ಮೇಲೆ ಎಷ್ಟೋ ಆದಿತ್ಯವಾರಗಳು ಹೋದವು. ಆದರೆ ಆ ದಿನ ಮೊನ್ನೆ ಮೊನ್ನೆ ಹೋದಂತೆ ನನಗೆ ಅನಿಸುವದು.

ಇರಲಿ, ಆ ಆದಿತ್ಯವಾರ ಬಂದಿತು. ಇನ್ನೈ ೫ ಮಿನಿಟು ಕಡಿಮೆ ಇರುವಾಗ ನಾನು ಕ್ಯಾತೋಟಕ್ಕೆ ಹೋದೆನು. ಆಗಲೇ ಅವಳು ಅಲ್ಲಿ ಬಂದು ಕುಳಿತಿದ್ದಳು. ಬಹಳಹೊತ್ತು ಮಾತಾಡಿದೆವು. ಬಹಳ ವಿಷಯ ಮಾತಾಡಿದೆವು ಯಾವ ಚರ್ಚದಲ್ಲಿ ಲಗ್ನವಾಗಬೇಕು, ಎಲ್ಲಿ ವಾಸಿಸ ಬೇಕು. ಎಂಬುದನ್ನು ಹೇಳಿದಳು.

ತೋಟದಿಂದ ಹೊರಬಿದ್ದು ವಿಲಿಯರ್ ಓಣಿಯಲ್ಲಿ ಹಾಯ್ದು ಸಾಗಿದೆವು. ಈಗ ಅವಳ ಮೊಗದಲ್ಲಿ ವಿಲಕ್ಷಣ ಉಲ್ಲಾಸವು ತುಂಬಿದೆ. ಗಿಳಿಯಂತೆ ಮುದ್ದಾಗಿ ಮಾತಾಡುತ್ತಿದ್ದಾಳೆ. ಅವಳ ಪೋಷಾಕು ಬಹಳ ಮೋಹಕವಾಗಿದೆ; ಅವಳ ಹ್ಯಾಟು....! ಅದಂತೂ ಓಣಿಯಲ್ಲಿಯ ಎಲ್ಲರ ಮನಸ್ಸನ್ನೂ ಎಳೆಯುತ್ತಿದೆ. ಸಣ್ಣ ಹುಡುಗರು ಆ ಹ್ಯಾಟನ್ನು ನೋಡಿ ಜಿಗಿದಾಡುತ್ತ ನಮ್ಮ ಹಿಂದೆಯೇ ಬಂದರು. ನನಗೆ ಹೇಗೆ ಹೇಗೋ ಆಯಿತು. ಅವಳನ್ನು ಬಿಟ್ಟು ಮುಂದೆ ಓಡಿಬಿಟ್ಟೆನು. ಆದರೆ ಅವಳು ಗಾಂಭೀರ್ಯದಿಂದಲೂ ಆನಂದೋನ್ಮಾದದಿಂದಲೂ ಬರುತ್ತಿದ್ದಾಳೆ. ಎಂಟೊನಿಯ ತೋಳಲ್ಲಿ ತೋಳನ್ನಿಟ್ಟು ಕ್ಲಿಯೋಪೆಟ್ರಾ ಬರುವಂತೆ ಬರುತ್ತಿದ್ದಾಳೆ. ಆ ಹ್ಯಾಟು ಅಷ್ಟು ಸುಂದರವಾಗಿಯೇ ಇದೆ. ಅಂಥಹದು ಹೆಂಗಸಿಗೆ ಆಭರಣವಿದ್ದಂತೆಯೇ ಅಲ್ಲವೇ ?

ನಾನು ಒಂದು ಇಮಾರತಿಗೆ ಮರೆಯಾಗಿ ಅವಳ ಸೌಂದರ್ಯವನ್ನು ನೋಡತೊಡಗಿದೆ. ಅವಳು ನನ್ನನ್ನು ಹುಡುಕುವವಳಂತೆ ಅತ್ತಿತ್ತ ನೋಡುತ್ತ ನಿಂತು ಬಿಟ್ಟಳು. ಹೋಗಬರುವವರು ಅವಳ ಕಡೆಗೆ ನೋಡಿ ವಂದನೆಯನ್ನರ್ಪಿಸುವರು. ಅವರಿಗೆ ಪ್ರತಿಯಾಗಿ ಇವಳು ಮಂದಹಾಸವನ್ನು ಬೀರುವಳು.

ಕಡೆಗೆ ನಾನೇ ಎಚ್ಚತ್ತೆನು. ಆ ಸ್ಥಳದಿಂದ ಮೆಲ್ಲಗೆ ಅವಳೆಡೆ ಸಾಗಿದೆನು. ಮೊದಲೇ ಮನದಲ್ಲಿ ನಿಶ್ಚಯಿಸಿದಂತೆ ಅವಳೆದುರು ಬಂದು ನಿಂತೆನು. ಹ್ಯಾಟನ್ನು ಎತ್ತಿದೆನು. ಮುಗುಳುನಗೆಯಿಂದ ನನ್ನ ವಂದನೆಯನ್ನು ಅವಳು ಸ್ವೀಕರಿಸಿದಳು, ನಾನು ನಕ್ಕೆನು. ಅವಳೂ ನಕ್ಕಳು.... ಅವಳು ನಕ್ಕಳು, ನಾನೂ ನಕ್ಕೆನು. ಕೈಗೆ ಕೈ ತೊಡರಿಸಿಕೊಂಡು ತೋಳಿಗೆ ತೋಳನ್ನು ಹೊಂದಿಸಿಕೊಂಡು ಸಾಗಿದೆವು. ಸಾಗಿಯೇ ಸಾಗಿದೆವು.

## ಸುಖ

ಸಂಜೆಯ ಇಳಿಬೆಳಕಿನಲ್ಲಿ ಭೂಮಧ್ಯ ಸಮುದ್ರದ ದೂರ ತೀರದಲ್ಲಿ ಚಹಾಪಾನಕ್ಕೆ ಕುಳಿತಾಗ ಅನೇಕರು ಅನೇಕ ವಿಷಯಗಳನ್ನೆತ್ತಿ ಮಾತಾಡತೊಡಗಿದರು. ಒಬ್ಬನು ಪ್ರಣಯದ ಮಾತನ್ನೆತ್ತಿದನು. ಇದು ಬಹಳ ಹಳೆಯ ವಿಷಯ. ಆದರೂ ಎಲ್ಲರ ಮನವನ್ನು ಉಲ್ಲಾಸಗೊಳಿಸುವಂತಹದು. ದೇಹದಲ್ಲಿ ಹುರುಪು ತುಂಬಿಸಿ ದುಃಖವನ್ನು ಕ್ಷಣಹೊತ್ತು ಮರೆವಂತಹ ವಿಷಯ.

"ಒಬ್ಬಳನ್ನೇ ನಂಬಿಕೊಂಡು ಕಡೆಯವರೆಗೂ ಅವಳೊಡನೆ ಕೂಡಿರುವದು ಶಕ್ಯವಿದೆಯೇ ?" ಎಂದನೊಬ್ಬನು.

"ಏಕಿಲ್ಲ ?" ಎಂದರು ಕೆಲವರು. "ಇಲ್ಲ" ಎಂದರು ಹಲವರು. ತಮ್ಮ ತಮ್ಮ ಪಕ್ಷಕಟ್ಟಿ ಅವರು ವಾದಿಸಿದರು. ತಮ್ಮ ಮಾತಿನ ಸಮರ್ಥನೆಗಾಗಿ ಅನೇಕ ಉದಾಹರಣೆಗಳನ್ನು ಎರಡೂ ಪಕ್ಷದವರು ಕೊಟ್ಟರು.

ಎಲ್ಲರೂ ವಾಗ್ವಾದದಲ್ಲಿ ತನ್ಮಯರಿರುವಾಗಲೇ ಒಬ್ಬನು ನುಡಿದನು.

"ನೋಡಿರಿ, ಅತ್ತ ನೋಡಿರಿ; ಅಲ್ಲಿ ಸಮುದ್ರದಲ್ಲಿ ದೂರ ಕಾಣುವದೇನು"

ಆಕಾಶ ಸಾಗರಗಳು ಕೂಡುವೆಡೆಯಲ್ಲಿ ಏನೋ ಒಂದು ಭೂಮಿ ಕಂಡಂತಾಯಿತು. ಹೆಂಗಳೆಯರು ಚಹದ ಮೇಜನ್ನು ಬಿಟ್ಟು ಓಡಿಹೋಗಿ ನೋಡತೊಡಗಿದರು.

"ಹವೆಯು ಚೆನ್ನಾಗಿದ್ದಾಗ ವರ್ಷದಲ್ಲಿ ಎರಡು ಮೂರು ಸಲ ಮಾತ್ರ ಅದು ಗೋಚರಿಸುವದು."

ಈ ನಡುಗಡ್ಡೆಯನ್ನು ಕಂಡು ಎಲ್ಲರಿಗೂ ಆಶ್ಚರ್ಯವಾಯಿತು. ಅದರ ಬಗ್ಗೆ ತಿಳಿದುಕೊಳ್ಳುವ ಆತುರವೂ ಅವರಲ್ಲಿ ಹುಟ್ಟಿತು.

ಮೊದಲು ಮಾತಾಡಿದ ಮುದುಕನೇ ಮತ್ತೆ ನುಡಿದನು. "ಇದೇ ಸಮಯದಲ್ಲಿ ಈನಡುಗಡ್ಡೆಯು ಮತ್ತೆ ಕಾಣಿಸಿಕೊಂಡುದರಿಂದ ನನಗೊಂದು

ವಿಲಕ್ಷಣವಾದ ಸಂಗತಿಯು ನೆನಪಾಗುವದು. ಹೆಣ್ಣುಗಂಡು ಸಾಯುವ ರೆಗೆ ಕೂಡಿಕೊಂಡಿದ್ದ ವಿಷಯ. ಅದು ಸಹಜವಾದ ಪ್ರೇಮದ ವಿಷಯ. ನಿರ್ಮಲ ಪ್ರೀತಿಯ ವಿಷಯ; ಅದೊಂದು ಕತೆಯೇ ಇದೆ.

“ಐದು ವರುಷಗಳ ಕೆಳಗೆ ನಾನು ಕೋರ್ಸಿಕಾ ನಡುಗಡ್ಡೆಗೆ ಹೋಗಿದ್ದೆನು. ಫ್ರಾನ್ಸಿನ ದಂಡೆಗೆ ಅದು ಸಮೀಪವಾಗಿದ್ದರೂ ಅಲ್ಲಿಗೆ ಹೋಗುಬರುವದು ಬಹಳ ಕಡಿಮೆ. ಗುಡ್ಡಗಾಡು ಪ್ರದೇಶವದು, ದಟ್ಟ ವಾದ ಅಡವಿಗಳಲ್ಲಿ ಅನೇಕ ಝರಿಗಳು ಹರಿಯುತ್ತಿವೆ. ಆಧುನಿಕ ಸುಧಾ ರಣೆಯ ಸಂಸ್ಕಾರಗಳು ಈ ನಡುಗಡ್ಡೆಯವರಿಗೆ ತಗಲಿಲ್ಲ. ರೋಮ ಕಾಲದ ಕಲಾವೈಭವವೂ ಇವರಲ್ಲಿಲ್ಲ.

ಈ ನಡುಗಡ್ಡೆಯ ಮನುಷ್ಯನು ಗುಡಿಸಲು ಕಟ್ಟಿಕೊಂಡು ವಾಸಿಸು ತ್ತಾನೆ. ತನಗಾಗಲೀ ತನ್ನ ಸಂಸಾರಕ್ಕಾಗಲಿ ಸಂಬಂಧಿಸಿದ ಯಾವ ಕಾರ್ಯ ದಲ್ಲಿಯೂ ಇವನು ಕೈ ಹಾಕುವದಿಲ್ಲ. ಆದರೆ ಅವನು ಅತಿಥಿಸತ್ಕಾರದಲ್ಲಿ ಬಹಳ ಆಸಕ್ತಿಯುಳ್ಳವನು. ಬಂದುಹೋಗುವವರನ್ನು ಬಹಳ ಪ್ರೀತಿಯಿಂದ ಕಾಣುವನು. ಊಟ ಉಪಚಾರಗಳಿಂದ ಆದರಿಸುವನು.

ಈ ನಡುಗಡ್ಡೆಯಲ್ಲಿ ನಾನು ಒಂದು ತಿಂಗಳು ಇದ್ದೆನು. ಇಲ್ಲಿ ಮಾರ್ಗ ಗಳಿಲ್ಲ, ವಾಹನಗಳಿಲ್ಲ. ಗುಡ್ಡ ಗವಿ ಕಂದರಗಳಲ್ಲಿ ಕಾಲ್ನಡಿಗೆಯಿಂದಲೇ ನಡೆಯಬೇಕು. ಸಂಜೆಯಾದಕೂಡಲೇ ಎದುರಿಗೆ ಕಾಣುವ ಗುಡಿಸಲಿಗೆ ಹೋಗಿ ಬಾಗಿಲನ್ನು ಬಡಿಯುತ್ತಿದ್ದೆನು. ಯಜಮಾನನು ಬಾಗಿಲನ್ನು ತೆಗೆದು ನನ್ನನ್ನು ಸ್ವಾಗತಿಸಿ, ಉಪಚರಿಸಿ ರಾತ್ರಿ ತನ್ನಲ್ಲಿಯೇ ಇರಬೇಕೆಂದು ಕೋರು ತ್ತಿದ್ದನು. ಮರುದಿನ ಮುಂಜಾನೆ ನನಗೆ ಹೊರಟುಹೋಗಲು ಅಪ್ಪಣೆ ಕೊಡುತ್ತಿದ್ದನು.

ಒಂದು ದಿನ ಒಂದು ಗುಡ್ಡದ ಮೇಲೆ ತಿರುಗಾಡಲು ಹೊರಟಿದ್ದೆನು. ಇನ್ನೂ ನಾನು ಗುಡ್ಡದ ಶಿಖರದ ಮೇಲಿರುವಾಗಲೇ ಸಂಜೆಯಾಗಿಬಿಟ್ಟಿತು, ರಾತ್ರಿಯ ವಿಶ್ರಾಂತಿಗೆ ಸ್ಥಳವನ್ನು ಅರಸುವದಕ್ಕಾಗಿ ಅತ್ತಿತ್ತ ದೃಷ್ಟಿಯನ್ನು ಚೆಲ್ಲಿದೆ. ಸಮೀಪದಲ್ಲಿಯೇ ಒಂದು ಗುಡಿಸಲು ಕಂಡಿತು ಗುಡಿಸಲ ಸುತ್ತಲೂ ಹಣ್ಣುಹಂಪಲಗಳ ತೋಟವಿತ್ತು. ತೆಂಗಿನ ಮರಗಳೂ ಇದ್ದವು.

ಪಕ್ಕದಲ್ಲಿ ಝರಿಯೊಂದು ಹರಿಯುತ್ತಿತ್ತು. ಗುಡಿಸಲಿನಲ್ಲಿ ಪ್ರವೇಶಿಸಿದೆನು. ಒಳ್ಳೇ ಅಚ್ಚುಕಟ್ಟಾಗಿ ಉಡುಪನ್ನು ಧರಿಸಿದ ಮುದುಕಿಯೊಬ್ಬಳು ಬಂದು ನನ್ನನ್ನು ಇದಿರುಗೊಂಡಳು. ಒಳಗೆ ಕೋಣೆಯಲ್ಲಿ ಹುಲ್ಲಿನ ಕುರ್ಚಿಯಲ್ಲಿ ಕುಳಿತ ಮುದುಕನು ನನ್ನನ್ನು ಕಂಡು ಎದ್ದು ನಿಂತು ನಮಸ್ಕರಿಸಿ ಮತ್ತೆ ಕುಳಿತನಷ್ಟೆ; ಅವನು ಏನೂ ಮಾತಾಡಲಿಲ್ಲ,

"ಕ್ಷಮಿಸಿರಿ" ಮುದುಕಿ (ಅವನ ಹೆಂಡತಿ) ಅಚ್ಚಫ್ರೆಂಚ ಭಾಷೆಯಲ್ಲಿ ನುಡಿದಳು. ನಮ್ಮವರಿಗೆ ೮೨ ವರ್ಷ ವಯಸ್ಸು ಕಿವಿ ಕೇಳಿಸುವದಿಲ್ಲ."

ಅವಳು ಪ್ರೆಂಚ್ ನುಡಿದದ್ದು ನನಗೆ ಬಹಳ ಅಚ್ಚರಿಯನ್ನುಂಟು ಮಾಡಿತು. "ಹಾಗಾದರೆ, ನೀವು ಇಲ್ಲಿಯ ಮೂಲನಿವಾಸಿಗಳಲ್ಲ!"

"ನಾವು ಇಲ್ಲಿ ಬಂದು ಐವತ್ತು ವರುಷಗಳಾದವು."

ಇಂತಹ ನಿರ್ಜನವಾದಪ್ರದೇಶದಲ್ಲಿ "ಐವತ್ತು ವರುಷಗಳವರೆಗೆ ಇವರಿದ್ದುದನ್ನು ಕೇಳಿ ಆಶ್ಚರ್ಯಪಟ್ಟೆನು. ಆದರಲ್ಲಿಯೂ ಪಟ್ಟಣಿಗನು ಇಲ್ಲಿ ನೆಲೆಸಿದ್ದು ನನ್ನನ್ನು ಭ್ರಮೆಗೊಳಿಸಿತು. ಅಷ್ಟರಲ್ಲಿ ಊಟದ ಕರೆ ಬಂದಿತು. ನಾವೆಲ್ಲರೂ ಹೋದೆವು. ನೆಲದಮೇಲೆ ಕುಳಿತುಗೊಂಡೆವು. ದಪ್ಪ ರೊಟ್ಟಿ, ಬಟಾಟೆ ಕ್ಯಾಬೀಜಗಳ ಪಲ್ಯೆ. ಇವಿಷ್ಟೇ ಊಟದ ಸಾಮುಗ್ರಿಗಳು. ಊಟವಾದ ಮೇಲೆ ನಾನು ಹೊರಗೆ ಬಂದು ತೆರಬಾಗಿಲಿಗೆ ಕುಳಿತುಕೊಂಡೆನು. ಮನಸ್ಸಿಗೆ ಬಹು ಬೇಜಾರೆನಿಸಿಬಿಟ್ಟಿತ್ತು. ಎತ್ತ ನೋಡಿದರೂ ಗುಡ್ಡ, ಕಾಡು ಇವೇ ಕಾಣುವವು. ತಲೆಯಲ್ಲಿಯ ವಿಚಾರಸರಣಿಯೇ ನಿಂತುಬಿಟ್ಟಿತ್ತು. ನಿರುತ್ಸಾಹವು ಹೃದಯುವನ್ನು ಪೂರ್ಣ ಆವರಿಸಿಬಿಟ್ಟಿತು. "ಇಲ್ಲಿಂದ ಆದಷ್ಟು ಬೇಗ ಎದ್ದು ಹೋಗಿಬಿಡಬೇಕು" ಎಂದೆನಿಸಿತು.

"ಅಷ್ಟರಲ್ಲಿ ಮುದುಕಿಯು ಬಹಳ ಉತ್ಸಾಹದಿಂದ ಓಡುತ್ತ ನನ್ನೆಡೆಗೆ ಬಂದಳು; ಕುಳಿತುಕೊಂಡಳು.

"ಹಾಗಾದರೆ ನೀವು ಫ್ರಾನ್ಸದಿಂದ ಬಂದಿದ್ದೀರಿ?" ಎಂದಳು.

"ಹೌದು; ವಿಹಾರಾರ್ಥವಾಗಿ ಬಂದಿದ್ದೇನೆ" ಎಂದೆನು.

"ಪ್ಯಾರಿಸದಲ್ಲಿಯೇ ಇರುವಿರೋ?"

"ಇಲ್ಲ ನಾನ್ಸಿಯಲ್ಲಿ."

ನಾನ್ಸಿಯ ಹೆಸರನ್ನು ಕೇಳಿದಕೂಡಲೇ ಅವಳಿಗೆ ಹೇಗೋ ಹೇಗೋ ಆಯಿತು. ಅವಳ ಮನದ ಮತ್ತು ದೇಹದ ಬದಲಾವಣೆಯು ಕಾಣದೇ ಇರಲಿಲ್ಲ.

" ನೀವು ನಾನ್ಸಿಯವರೇನು ? "

ನಮ್ಮಿಬ್ಬರಲ್ಲಿ ನಡೆದ ಸಂಭಾಷಣದಿಂದ ಉಂಟಾದ ವಾತಾವರಣವನ್ನು ಏನೂ ಅರಿಯದ ಅವಳ ಗಂಡನು, ಮೆಲ್ಲಗೆ ನಮ್ಮಿಬ್ಬರ ಹಿಂದೆ ಬಂದು ನಿಂತನು.

" ಅವರು ಬಂದರೇನಾಯಿತು. ನಾವು ಮಾತಾಡಿದ್ದು ಅವರಿಗೆ ಕೇಳಿಸುವದೇ ಇಲ್ಲ." ಅವಳು ತುಸು ನಕ್ಕು ನುಡಿದಳು.

" ನಾನ್ಸಿಯಲ್ಲಿಯ ಪ್ರತಿಷ್ಠಿತ ಜನರ ಪರಿಚಯವು ನಿಮಗಿದ್ದೀತು.

" ಸುಮಾರಾಗಿ ಎಲ್ಲರನ್ನೂ ನಾನು ಬಲ್ಲೆನು" ಎಂದೆನು.

" ನಿಮಗೆ ಅಲಾಯಿಂಝಿ ಸರವರ ಪರಿಚಯವದೆ ಹಾಗಾದರೆ ? "

" ಇರದೇನು? ಅವರು ನಮ್ಮ ತಂದೆಯ ಮಿತ್ರರು.' '

" ನಿಮ್ಮ ಹೆಸರೇನು ? "

ನಾನು ನನ್ನ ಹೆಸರನ್ನು ಹೇಳಿದೆನು. ಅವಳು ಗುರುತಿಸುವ ರೀತಿಯಲ್ಲಿ ನನ್ನನ್ನು ದಿಟ್ಟಿಸಿ ನೋಡತೊಡಗಿದಳು. ಕಡೆಗೆ ತೀರ ಕೆಳಗಿನ ಧ್ವನಿಯಲ್ಲಿ ನುಡಿದಳು.

" ಹಾ ! ಹಾ ! ಈಗ ತಿಳಿಯಿತು. ಬ್ರಿಸಮೋರ್‍ಸ ಬಂಧುಗಳು ನೆಟ್ಟಗಿರುವರೇ ?"

" ಅವರೆಲ್ಲರೂ ತೀರಿಕೊಂಡರು. "

" ಅಯ್ಯೋ ಪಾಪ ! ನಿಮಗೆ ಸರ್ಮಂಟ್ಸರು ಗೊತ್ತುಂಟೋ?"

" ಅವರಲ್ಲಿ ಎಲ್ಲಕ್ಕೂ ಚಿಕ್ಕವನು ಈಗ ಸೇನಾಪತಿಯಾಗಿದ್ದಾನೆ "

ಅವಳು ಅಚ್ಚರಿಗೊಂಡಳು. ಏನೋ ನೆನಪಿಗೆ ಬಂದಿರಬೇಕು; ಅವಳು ಬಹಳವಾಗಿ ನೊಂದುಕೊಂಡಳು. ಹೃದಯದಲ್ಲಾಗುತ್ತಿದ್ದ ಅನೇಕ ವಿಚಾರಗಳು ಅವಳ ಮೊಗದಮೇಲೆ ಒಡೆದು ಕಾಣತೊಡಗಿದವು. ಬರಿದಾದ ವಾತಾವರಣದಲ್ಲಿ ಏನೋ ನೋಡುತ್ತ ನುಡಿದಳು.

" ಹೆನ್ರಿ ಡಿ. ಸರ್ಮಂಟೆ.... ಅವನು ನನ್ನ ಅಣ್ಣನು."

ನಾನು ಒಮ್ಮೆಲೆ ಅವಳ ಕಡೆಗೆ ತಿರುಗಿ ಆಶ್ಚರ್ಯದಿಂದ ನೋಡತೊಡಗಿದೆನು. ನನಗೆ ಹಿಂದಿನದೆಲ್ಲವೂ ನೆನಪಾಯಿತು. ಬಾಲ್ಯದಲ್ಲಿಯ ಅವಳ ರೂಪವು ನನ್ನ ಕಣ್ಣುಮುಂದೆ ಬಂದಿತು.

ಸುಜೆನಾ ಒಬ್ಬ ಸೇನಾಪತಿಯ ಮಗಳು. ತಂದೆಯು ಸೈನಿಗರಿಗೆ ಕವಾಯತು ಕಲಿಸುವಾಗ ಒಬ್ಬ ಸಾಮಾನ್ಯ ಸೈನಿಕನನ್ನು ನೋಡಿದಳು. ಅವನ ರೂಪಕ್ಕೆ ಮೋಹಿತೆಯಾದಳು. ವಿವಾಹಿತಳಾಗಿದ್ದರೂ ಅವನ ಮೇಲೆ ಆಸೆಯಾಯಿತವಳಿಗೆ. ಸುಜೆನಾ ದೊಡ್ಡ ಅಧಿಕಾರಿಯ ಮಗಳಾಗಿದ್ದರೂ ತನ್ನ ಪ್ರಿಯನನ್ನು ಹೇಗೆ ಕಂಡಳು? ಎಲ್ಲಿ ಕಂಡಳು? ತಾನು ಅವನನ್ನು ಪ್ರೀತಿಸುವಳೆಂದು ಅವನಿಗೆ ತಿಳಿಸಿದ ಬಗೆ ಎಂತು? ಎಂಬುದು ಯಾರಿಗೂ ಗೊತ್ತಿಲ್ಲ. ಸೈನಿಕ ಶಿಕ್ಷಣದ ಅವಧಿ ಮುಗಿದ ಮರುದಿನವೇ ಸುಜೇನಾ ಇಲ್ಲವಾಗಿದ್ದಳು. ಆ ಸೈನಿಕನೂ ಇಲ್ಲ. ಸ್ವತಃ ಸೇನಾಪತಿಯ ಮಗಳು ಕಣ್ಮರೆಯಾದರೆ ಹುಡುಕುವದರಲ್ಲಿ ಸ್ವಲ್ಪಾದರೂ ಆಲಸ್ಯವಾದೀತೇ? ಅಲಕ್ಷ್ಯವಾದೀತೇ? ಎಷ್ಟು ಹುಡುಕಿದರೂ ಇವರಿಬ್ಬರ ಸುಳುವೇ ಕಾಣಬರಲಿಲ್ಲ.

ಆದರೆ ನಾನು ಈಗ ಇವಳನ್ನು ಕಂಡೆನು.

"ನನಗೆ ಈಗ ಎಲ್ಲವೂ ನೆನಪಾಯಿತು. ನೀವು ಶ್ರೀಮತಿ ಸುಜೆನಾ...."

ಅವಳು ಒಪ್ಪಿಗೆ ಸೂಚಿಸುವಂತೆ ತಲೆಯನ್ನು ಅಲ್ಲಾಡಿಸಿದಳು. ಕಣ್ಣುಗಳಿಂದ ಹನಿಗಳು ದಳದಳನೇ ಉದುರಿದವು. ಇಲ್ಲಿಯವರೆಗೆ ಕಂಬದಂತೆ ನಿಂತಿದ್ದ ಆ ಮುದುಕನ ಕಡೆಗೆ ನೋಟದ ಸನ್ನೆಮಾಡಿ ನುಡಿದಳು.

" ಇವರು ನನ್ನ ಪತಿದೇವರು."

ಇಷ್ಟು ಮುದುಕನಾದರೂ ಅವಳು ಇನ್ನೂ ಇವನನ್ನೇ ಪ್ರೇಮಪೂರಿತ ದೃಷ್ಟಿಯಿಂದ ನೋಡುವಳು.

" ದಾಂಪತ್ಯ ಜೀವನವು ಸುಖವಾಗಿದೆಯೇ?" ಎಂದು ನಾನು ಬಹಳ ಧೈರ್ಯ ತಂದುಕೊಂಡು ಕೇಳಿದೆನು.

ಅವಳು ಹೃತ್ಪೂರ್ವಕವಾಗಿ ನುಡಿದಳು. "ಹೌದು ನಾನು ಬಹಳ ಸುಖದಿಂದ್ದೇನೆ. ನನ್ನ ಮನ ನೋಯುವ ಯಾವಕಾರ್ಯವನ್ನೂ ಇನ್ನೂ ವರೆಗೂ ಇವನು ಮಾಡಿಲ್ಲ."

ಇದನ್ನು ಕೇಳಿ ನನಗೆ ಬಹಳ ಆಶ್ಚರ್ಯವಾಯಿತು. ಪ್ರೇಮವು ಇವರೀರ್ವರಲ್ಲಿ ಆಳವಾಗಿರುವದೆಂಬುದನ್ನು ಕಂಡು ಆದರಭಾವದಿಂದ ಅವಳನ್ನು ಪುನಃ ನೋಡಿದೆನು.

ಸುಜೆನಾ ದೊಡ್ಡ ಅಧಿಕಾರಿಯ ಮಗಳು, ಸಿರಿವಂತಿಕೆಯಲ್ಲಿ ಬೆಳೆದ ಹುಡುಗಿ, ಸೊಗಸುಗಾರಿಕೆಯಲ್ಲಿ ಲೋಲಾಡಿದವಳು; ಇಂಥವಳು ಒಬ್ಬ ಬಡ ಒಕ್ಕಲಿಗನ ಮಗನ ಸಂಗಡ ಕೂಡಿಕೊಂಡಿದ್ದುದು, ಅದರಲ್ಲಿಯೂ ಕಡೆಯುವರೆಗೂ ಅವನೊಡನೆ ಇರುವದು ಯಾರಿಗೆ ಸೋಜಿಗವೆನಿಸಲಿಕ್ಕಿಲ್ಲ; ತನ್ನ ಪ್ರಿಯನು ಬಡವನು. ಅವನ ಆದಾಯದಲ್ಲಿಯೇ ತೃಪ್ತಿ ಹೊಂದಿದ್ದಾಳೆ. ಹುಲ್ಲಿನ ಕೇರ್ಚಿಯ ಮೇಲೆ ಕೂಡ್ರುತ್ತಾಳೆ. ಮಣ್ಣಿನ ಹರಿವಾಣದಲ್ಲಿ ಊಟ ಮಾಡುತ್ತಾಳೆ. ವಜ್ರವೈಢೂರ್ಯಗಳ ಆಭರಣಗಳನ್ನು ಬಿಟ್ಟಿದ್ದಾಳೆ. ರೇಶಿಮೆಯ ಝುಗಗಳನ್ನು ತೊರೆದಿದ್ದಾಳೆ. ಮೆತ್ತನ್ನ ಕುರ್ಚಿ ಗಾದಿಯ ಆಸನಗಳಂತೂ ಇವಳಿಗೆ ಕನಸಿನಲ್ಲಿಯೂ ಕಂಡರಿಯಳು. ಆದರೂ ಸಂತೋಷದಲ್ಲಿದ್ದಾಳೆ. "ಇವನು ನನ್ನ ಹತ್ತರವಿರುವಾಗ ನನಗೇನೂ ಬೇಕಾಗುವದಿಲ್ಲ" ಎಂದಂದುಬಿಟ್ಟಳು ಅವಳು.

ನಾನು ಅಲ್ಲಿ ಇರುವವರೆಗೆ ಈ ದಂಪತಿಗಳ ಮನೆಯಲ್ಲಿಯೇ ಇದ್ದೆ. ಪ್ರಣಯದ ಪರಿಪೂರ್ಣತೆಯ ಆ ಎರಡು ವಿಭೂತಿಗಳ ಜೀವನದ ಸೊಬಗನ್ನು ಸವಿದೆನು. ಕೆಲದಿನಗಳಮೇಲೆ ಹೊರಡಲು ಅವರಿಂದ ಅಪ್ಪಣೆಪಡೆದೆನು.

\+ \+ \+

ಕತೆ ಮುಗಿದದ್ದರಿಂದ ಮುದುಕನು ಸುಮ್ಮನಾದನು. "ನೀವು ಬೇಕಾದದ್ದನ್ನಿ, ನನ್ನಮಟ್ಟಿಗೆ ಹೇಳುವದಾದರೆ," ಚಹಾ ಸೇವನೆಗಾಗಿ ಬಂದಿದ್ದವರಲ್ಲಿ ಒಬ್ಬಳು ನುಡಿದಳು.... ಅವಳ ಆಶೆಯೇ ಸಂಕುಚಿತ ದೃಷ್ಟಿಯುಳ್ಳದ್ದು, ಕೇವಲ ಇಷ್ಟಕ್ಕಾಗಿ ತನ್ನ ಜೀವನದ ವೈಭವವನ್ನು ತ್ಯಜಿಸಿ ಬಡತನದಲ್ಲಿ ಜೀಯಬೇಕೇ?.... ಅವಳು ಮೂರ್ಖಳು!"

ಮತ್ತೊಬ್ಬಳು ಮಾತಾಡಿದಳು. "ದುಡ್ಡು,ಸೊಗಸುಗಾರಿಕೆ, ಏತಕ್ಕಾಗಿ? ಸುಖಕ್ಕಾಗಿ ಅಲ್ಲವೇ? ಅವಳು ಸುಖವಾಗಿದ್ದಳು, ತೀರಿತು. ದುಡ್ಡು, ವೈಭವ ಇದ್ದರೂ ಅಷ್ಟೇ, ಇಲ್ಲದಿದ್ದರೂ ಅಷ್ಟೇ"

ಕ್ರಮೇಣ ಕತ್ತಲೆಯಾಗತೊಡಗಿತು. ದೂರದಲ್ಲಿ ಸಮುದ್ರ ಆಕಾಶ ಗಳು ಕೂಡುವೆಡೆಯಲ್ಲಿ ಕಾಣುತ್ತಿದ್ದ ಕೋರ್ಸಿಕಾ ನಡುಗಡ್ಡೆಯು ಅದೃಶ್ಯ ವಾಗತೊಡಗಿತು. ಆ ದಂಪತಿಗಳ ಜೀವನವನ್ನು ನೆನಪು ಮಾಡಿಕೊಡು ವದಕ್ಕಾಗಿ ಇದು ಗೋಚರಿಸಿ ಮಾಯವಾಯಿತೋ ಎಂದೆನಿಸಿಬಿಟ್ಟಿತು.

## ಮುಸುಕು

ಉದ್ಯಾನದಲ್ಲಿಯ ಒಂದು ಬೆಂಚದ ಮೇಲೆ ನಾರ್ಮನ್ ಗಾರ್ಬಿಯು ಕುಳಿತಿರುವನು. ಬೆಂಚದ ಬೆನ್ನಿಗೆ ಆತು, ವಿಶ್ರಾಂತಿ ಹೊಂದುತ್ತಿರುವನು. ಅವನ ಬೆನ್ನ ಹಿಂದೆ ಲತಾಮಂಟಪದಂತೆ ಒಂದು ಕಂಟಿಯು ಬೆಳದಿರುವದು ಎದುರಿಗೆ ವಾಹನಗಳು ಓಡಾಡುವದಕ್ಕೆ ಅನುಕೂಲವಾಗುವಂತೆ ದಾರಿ ಯನ್ನು ಬಿಟ್ಟಿರುವರು. ಶಹರದಲ್ಲಿ ಎಲ್ಲಕ್ಕಿಂತಲೂ ಹೆಚ್ಚು ಗದ್ದಲವುಳ್ಳ ಹಾಯಿಪಾರ್ಕ ಕಾರ್ನರು ಇವನ ಬಲಗಡೆಗಾಗುವದು. ಮಾರ್ಚ ತಿಂಗಳು. ಸಂಜೆ ಸುಮಾರು ಆರುವರೆ ಗಂಟೆಯಾಗಿರಬಹುದು. ಸೂರ್ಯನು ಆಗಲೇ ಮುಳುಗಿಹೋಗಿದ್ದರಿಂದ ಮುಸುಕು ಕವಿದಿತ್ತು. ದೂರದಲ್ಲಿಯ ದಾರಿಯ ದಾರಿ ದೀಪಗಳು, ಮತ್ತು ಆಕಾಶದಲ್ಲಿಯ ಚಂದಪ್ಪನು ಸಹ ಸ್ಪಷ್ಟವಾಗಿ ಕಾಣಿಸುತ್ತಿರಲಿಲ್ಲ. ಅಗಲವಾದ ರಾಜಬೀದೆಗಳೂ ಅಲ್ಲಲ್ಲಿಯ ಕಾಲದಾರಿ ಗಳೂ ಉದ್ದವಾಗಿ ಮಲಗಿದಂತೆ ತೋರುತ್ತಿದ್ದವು. ಅವುಗಳ ಮೇಲೆ ಜನ ರಿರದಿದ್ದರೂ ಈ ತೋಟದಲ್ಲಿ ಓಡಾಡುತ್ತಿರುವವರಿಗೇನೂ ಕಡಿಮೆ ಇರಲಿಲ್ಲ. ಈ ಮುಸುಕಿನಲ್ಲಿ ಕಪ್ಪು ಬಣ್ಣದ ಓಡಾಡುವ ಕಂಬಗಳಂತೆ ಜನರು ಕಾಣು ತ್ತಿದ್ದರು. ಒಬ್ಬೊಬ್ಬರೇ ಬರುವರು, ಬೆಂಚದ ಮೇಲೆ ತುಸು ಹೊತ್ತು ಕೂಡ್ರುವರು, ಮರಳಿ ಹೊರಟು ಹೋಗುವರು.

ಇದನ್ನೆಲ್ಲ ನೋಡಿ ಗಾರ್ಬಿಯು ಬಹಳ ಸಮಾಧಾನ ಹೊಂದಿದನು. ಈಗಿನ ಅವನ ಮನಸ್ಥಿತಿಗೆ ಅಲ್ಲಿಯ ವಾತಾವರಣವು ಸುಖವನ್ನೀಯಿತು.

ನಿಜವಾಗಿಯೂ ಈ ಕಾಲವು ಬಹಳ ಅನುಕೂಲವಾದದ್ದು. ಜೀವನದಲ್ಲಿ ನಿರಾಶೆ ಹೊಂದಿದವರು, ವ್ಯವಹಾರದಲ್ಲಿ ಪತಿತರು, ಸಾಲತೆಗೆದವರು ಹೊರಗೆ ಓಡಾಡಲು ಅನುಕೂಲವಾದ ವೇಳೆಯು ಇದೇ. ಶ್ರೀಮಂತರಾಗಿ ಬೆಳೆದು ಬಡವರಾದವರೂ, ಹರಿದಿರುವ ಅಥವಾ ಮಲಿನವಾದ ಅರಿವೆಯನ್ನು ಧರಿಸಿದವರೂ, ನಿಸ್ಸಂಕೋಚದಿಂದ ಹೊರಬೀಳುವದು ಈಗಲೇ. ರಣದಲ್ಲಿ ಸೋತು ರಾಜ್ಯಭ್ರಷ್ಟನಾದ ರಾಜನು ಈ ಮುಸುಕಿನಲ್ಲಿಯೇ ತಿರುಗಾಡಲು ಹೊರಡುವನು. ಬಡತನದ ಹೊಡೆತಕ್ಕೆ ಸಿಲುಕಿ ನಿರ್ವಾಹವಿಲ್ಲದೆ ಹಳೇ ಮಾದರಿಯ ಪೋಷಾಕನ್ನು ಧರಿಸಿದ ತರುಣರಿಗೆ ಶ್ರೀಮಂತರು ಆಟವಾಡಿ ಹೋದ ಸುಂದರವಾದ ಮೈದಾನಿನಲ್ಲಿ ಅಲೆದಾಡಲು ಅನುಕೂಲ ಮಾಡಿಕೊಡುವದು ಇದೇ ವೇಳೆಯು.

ಇಂಥ ಮುಸುಕು ಜಾರುತ್ತಿದ್ದರೂ ಗಾರ್ಬಿಯು ಅಲ್ಲಿಯೇ ಕುಳಿತಿದ್ದನು. ಬೀದಿಗಳಲ್ಲಿಯ ಗದ್ದಲವು ಕೇಳಬರುವದು. ಜೀವನದಲ್ಲಿ ಬಹುಭಾಗ ನಿರಾಶೆ ಹೊಂದಿದ್ದರೂ ಎಲ್ಲಿಯೋ ಆಶೆಯನ್ನು ಹುಡುಕಲು ಹಾತೊರೆದು ಭರದಿಂದ ಸಾಗಿದ ಜನಗಳ ಗದ್ದಲವು ಬಹಳವಾಗಿತ್ತು. ಗಾರ್ಬಿಯ ಮನವು ಅನೇಕ ವಿಷಯಗಳನ್ನು ಚಿತ್ರಿಸುತ್ತಿತ್ತು. ಅವನಿಗೆ ಬಹಳ ಆಶೆ ಆಕಾಂಕ್ಷೆಗಳಿದ್ದವು. ಆದರೆ ಅವಾವೂ ಫಲಿಸಲಾರವೆಂಬ ನಿರಾಶೆಯಲ್ಲಿ ಅವನು ಇಂದು ಬೆಂಚದಮೇಲೆ ಕುಳಿತಿದ್ದಾನೆ. ಅವನಿಗ ದುಡ್ಡಿನ ಕೊರತೆ ಇಲ್ಲ. ಆಶೆಯಿದ್ದರೆ ಬೇಕಾದಷ್ಟು ಧನ ಸಂಪಾದಿಸಿ ಶ್ರೀಮಂತರಲ್ಲಿ ಶ್ರೀಮಂತನಾಗಿ ಮೆರೆದಾಡುತ್ತಿದ್ದನು; ಅದಕ್ಕಾಗಿ ಹಗಲಿರುಳು ಯತ್ನಿಸುತ್ತಿದ್ದನು.

ಅದೇ ಬೆಂಚದ ಮೇಲೆ ಒಬ್ಬ ಮುದುಕನು ಬಂದು ಕುಳಿತನು. ಜೀವನದಲ್ಲಿ ಎಲ್ಲಿ ಹುಡುಕಿದರೂ ಸುಖ ಕಾಣದೆ ನಿರಾಶೆಯನ್ನು ಹೊಂದಿದವನಿವನೆಂದು ಇವನ ಮೊಗವನ್ನು ನೋಡಿದವರಿಗೆಲ್ಲರಿಗೂ ಗೊತ್ತಾಗಿ ಬಿಡುತ್ತಿತ್ತು. ಮೈಮೇಲಿನ ವಸ್ತ್ರವೆಲ್ಲವೂ ಹರಿದುಹೋಗಿದ್ದಿತು. ಅವನ ಹತ್ತರ ಒಂದು ಕಾಸೂ ಸಹ ಇರಲಿಲ್ಲ. ಇವನ ವ್ಯಕ್ತಿತ್ವವನ್ನು ಯಾರೂ ಗಣೆಸುತ್ತಿರಲಿಲ್ಲ. ಇವನಿಗಾಗಿ ಯಾರೂ ಕರುಣೆ ತೋರಿದಂತೆ ಕಾಣಲಿಲ್ಲ. ಮುದುಕನು ತುಸು ಹೊತ್ತು ಕುಳಿತು ಎದ್ದುಬಿಟ್ಟನು; ಆಗ ಗಾರ್ಬಿಯು

ಯೋಚಿಸಿದನು. " ಪಾಪ ಮನೆಗೆ ಹೋದರೆ ಇವನ ಬರಿಕೈಯನ್ನು ನೋಡಿ ಹೆಂಡತಿ ಮಕ್ಕಳು ಇವನನ್ನು ಎಷ್ಟು ಕಾಡುವರೋ........ಅಥವಾ ಇವನು ಹಾಟೇಲಿನಲ್ಲಿ ಇರುವವನಾಗಿದ್ದರೆ ಆ ಯಜಮಾನನು ಇವನನ್ನು ನಾಯಿಗಿಂತಲೂ ಕಡೆಗಣಿಸುವನಲ್ಲವೇ........ "ಎಂದು.

ಮುದುಕನು ಹೊರಟುಹೋದನು. ಆ ಸ್ಥಳದಲ್ಲಿ ಒಬ್ಬ ಯುವಕನು ಬಂದು ಕುಳಿತನು. ತಕ್ಕಮಟ್ಟಿಗೆ ಒಳ್ಳೇ ಪೋಷಾಕನ್ನು ಧರಿಸಿದ್ದನು. ತುಸು ಉತ್ಸಾಹದಲ್ಲಿದ್ದಂತೆಯೂ ಕಂಡನು. ಆದರೆ ಅವನು ಬರುವ ರೀತಿಯನ್ನೂ ಜೋರಿನಿಂದ ಕುಳಿತ ರೀತಿಯನ್ನೂ ನೋಡಿದರೆ ಎಷ್ಟು ದುಡಿದರೂ ದೈವವು ಅವನಿಗೆ ಪ್ರತಿಕೂಲವಾಗಿದೆಯೆನ್ನುವಂತೆ ಗಾರ್ಬಿಗೆ ತೋರಿತು.

" ಎಲ್ಲಾ ಅರಾಮ್ರೀ ? " ಗಾರ್ಬಿಯು ಇವನು 'ಅರಾಮು' ಇಲ್ಲವೆಂಬ ಭಾವನೆಯಿಂದ ಹಠಾತ್ತಾಗಿ ಕೇಳಿದನು.

ತರುಣನು ಎಚ್ಚತ್ತವನಂತಾಗಿ "ಆಂ" ಎಂದನು.

" ಆದರೂ ನನ್ನಷ್ಟು ಯಾರೂ ಅನುಭೋಗ್ಸಿಲ್ಲ. ಒಂದೇ ಒಂದು ಸಣ್ಣ ಮಾತಿಂದಸಿಂದ ನನ್ನ ಆಯುಷ್ಯಾನೇ ಕಹಿ ಆಯಿತು."

" ಹಾಂ ಹಾಂ " ಹುಬ್ಬು ಏರಿಸಿದನು ಗಾರ್ಬಿಯು.

" ಬರ್ಕಶಾಯರ ಸ್ಕ್ವೇರ್‌ದಲ್ಲಿರುವ ಪಟಗಾನಿಯನ್ ಹಾಟೇಲದಲ್ಲಿ ಳಿಯಬೇಕೆಂದು ಈ ದಿನ ಸಂಜೆಯಲ್ಲಿ ಇಲ್ಲಿಗ ಬಂದೆನು " ತರುಣನು ಹೇಳಹತ್ತಿದನು. "ಅಲ್ಲಿ ಹೋಗಿ ನೋಡಲಾಗಿ ಹಾಟೇಲನ್ನು ಕೆಡವಿ ಸಿನೆಮಾ ಥೇಟರನ್ನು ಆ ಸ್ಥಳದಲ್ಲಿ ಕಟ್ಟಿದ್ದರು! ಟಾಂಗಾದವನು ಮತ್ತೊಂದು ಹಾಟೇಲಿಗೆ ಕರೆದೊಯ್ದು ಅಲ್ಲಿ ನನ್ನನ್ನು ಇಳಿಸಿದನು. ನನ್ನ ಊರಿಗೆ ನಾನು ಸುರಕ್ಷಿತ ಬಂದೆನೆಂದು ಪತ್ರ ಬರೆದೆನು. ಹಾಟೇಲದಲ್ಲಿಯ ಸಾಬಾನು ಚನ್ನಾಗಿರುವದಿಲ್ಲ. ಸ್ನಾನಕ್ಕಾಗಿ ಒಂದು ಸಾಬಾನನ್ನು ತರಲು ಪೇಟೆಗೆ ಸಾಗಿದೆನು. ಸೋಡಾದ ಅಂಗಡಿಗೆ ಹೋಗಿ ಸೋಡಾ ಕುಡಿದೆನು. ಒಂದು ಸಾಬಾನಿನ ಅಂಗಡಿಯಲ್ಲಿ ಸಾಬಾನಿನ ಒಡೆಯೊಂದನ್ನು ಕೊಂಡೆನು. ಆಗ ನನಗನಿಸಿತು, ನಾನು ಇಳಿದ ಹಾಟೇಲಿನ ಹೆಸರೇ ನನಗೆ ನೆನಪಾಗಲೊಲ್ಲದು.

ಅದಿರುವ ಬೀದಿಯ ಹೆಸರೂ ನನಗೆ ಗೊತ್ತಿಲ್ಲ. ಈ ಲಂಡನ್ನ ಶಹರದಲ್ಲಿ ಅದನ್ನೆಲ್ಲಿ ಹುಡುಕಬೇಕು? ನಮ್ಮ ಮನೆಗೆ ತಾರು ಕಳಿಸಿದರೆ, ನನ್ನ ಪತ್ರ ದಲ್ಲಿ ನೋಡಿ ಹಾಟೇಲಿನ ವಿಳಾಸ ತಿಳಿಸಬಹುದು. ಆದರೆ ಆ ಪತ್ರ ಅವ ರಿಗೆ ನಾಳೆ ತಲ್ಪುವದು. ಈಗ ನನ್ನ ಹತ್ತರ ದುಡ್ಡು ಕೂಡ ಇಲ್ಲ. ಒಂದು ಪೆನ್ಸ್ ಮಾತ್ರವಿದೆ. ಈ ರಾತ್ರಿ ಹೇಗೆ ಕಳೆಯಲಿ? ಅದಕ್ಕಾಗಿ ಇಲ್ಲಿ ಈ ತೋಟಕ್ಕೆ ಬಂದಿದ್ದೇನೆ."

ಕತೆ ಹೇಳುವದು ಮುಗಿದ ಮೇಲೆ ಇಬ್ಬರೂ ತುಸು ಹೊತ್ತು ಸುಮ್ಮನೆ ಕುಳಿತರು.

"ಇಂತಹ ವ್ಯಕ್ತಿಯನ್ನು ಎಲ್ಲಿಯಾದರೂ ನೋಡಿದ್ದಿರಾ?'' ತರು ಣನು ಕೆಳಗಿನ ಧ್ವನಿಯಲ್ಲಿ ನುಡಿದನು.

"ಇದೇನು ಅಷ್ಟು ಆಶ್ಚರ್ಯಲ್ಲ, ನಮಗೂ ಒಮ್ಮೆ ಹಿಂಗೇ ಆಗಿತ್ತು. ಆದರೆ ನಾವು ಇಬ್ಬರಿದ್ವಿ, ಆ ಹಾಟೇಲು ಒಂದು ಕಾಲ್ವೀಹತ್ತರ ಅದ ಅಂಬೋದು ನಮಗ ಗೊತ್ತಿತ್ತು. ಆ ಕಾಲ್ವಿ ಪತ್ತೆ ಹಚ್ಚಿದ್ವಿ, ಆ ಮ್ಯಾಲೆ ಹಾಟೇಲು ತಾನೇ ಸಿಕ್ಕಿತು'' ಗಾರ್ಬಿಯು ತನ್ನ ಅನುಭವವನ್ನು ಹೇಳಿದನು.

"ಪರಊರಲ್ಲಿ ಹೀಗಾಗುವದು ಸ್ವಾಭಾವಿಕ. ಆದರೂ ಯಾರಾದರೂ ನನಗೆ ತುಸು ದುಡ್ಡು ಕೈಗಡ ಕೊಟ್ಟರೆ ಒಳಿತಾಗುವದು. ಇಲ್ಲದಿದ್ದರೆ ನಾನು ಈ ರಾತ್ರಿಯನ್ನು ಈ ಬೆಂಚದ ಮೇಲೆಯೇ ಮಲಗಿ ಕಳೆಯಬೇಕಾ ಗುವದು. ಇದಕ್ಕೇನನ್ನುವಿರಿ?'' ತರುಣನು ಮುಂದರಿದನು. ತಾನು ಕೈಗಡ ಕೊಡುವೆನೆಂದು ಗಾರ್ಬಿಯು ಮುಂದೆ ಬರಬಹುದೆಂಬ ಭಾವನೆ ಯಿಂದ ಮತ್ತೊಮ್ಮೆ ನುಡಿದನು "ಆಂ, ಇದಕ್ಕೇನನ್ನುವಿರಿ?'' ಎಂದು.

"ಯೋಗ್ಯ ಅದ,'' ಗಾರ್ಬಿಯು ನುಡಿದನು. "ಹಾಟೇಲಿನ ಹೆಸರು ಕಳಕೊಂಡೀರೀ ಅಂದಮ್ಯಾಲೆ, ನೀವು ಸಾಬಾನನೂ ಕಳಕೊಂಡಿರಲಿಕ್ಕೇ ಬೇಕು.''

ತರುಣನು ಒಮ್ಮೆಲೇ ಎದ್ದು ನಿಂತು ಓವ್ಹರ್ ಕೋಟಿನ ಕಿಸೆಯಲ್ಲಿ ಸಾಬಾನನ್ನು ಹುಡುಕಹತ್ತಿದನು. "ಆಂ, ಹೋಗಿಯೇ ಬಿಟ್ಟಿತೋ ಏನೋ" ಸಿಟ್ಟಿನಿಂದ ನುಡಿದನು.

"ಒಂದ ದಿನದಾಗ ಹಾಟೇಲಿನ ಹೆಸರೂ ಸಾಬಾನೂ ಕಳ ಕೊಂಬೋದು ಅಂದರ, ಏನ ತೋರಸ್ತದ?'' ತರುಣನ ಲಕ್ಷ್ಯವು ಗಾರ್ಬಿಯ ಈ ಮಾತಿನ ಕಡೆಗಿರಲಿಲ್ಲ. ಸಾಬಾನನ್ನು ಹುಡುಕಲು ಮೇಲೆ ಕೆಳಗೆ ಅತ್ತ ಇತ್ತ ನೋಡುತ್ತ ನಿಂತಿದ್ದನು. ಹಾಗೆಯೇ ಹುಡುಕುತ್ತ ಮುಂದೆ ಸಾಗಿ ಹೋದನು.

"ಏನು ಈಗಿನ ಹುಡುಗರು'' ಎಂದು ನಿರಾಶೆಯನ್ನು ಸೂಚಿಸುವಂತೆ ಕೈ ತೆರುವಿ ಗಾರ್ಬಿಯು ಎದ್ದು ಮನೆಗೆ ಹೊರಡಲನುವಾದನು. ಆದರೆ ಅಕಸ್ಮಾತ್ತಾಗಿ ಅವನ ದೃಷ್ಟಿಯು ಬೆಂಚಿನ ಕೆಳಗೆ ಬಿದ್ದ ಓವ್ಹಲ್ ಆಕಾರದ ಸಾಬಾನಿನ ಒಡೆಯ ಕಡೆಗೆ ಹರಿಯಿತು. ಅದನ್ನು ಎತ್ತಿದನು. ತರುಣನು ಅಲಕ್ಷ್ಯವಾಗಿ ಕುಳಿತುಕೊಳ್ಳುವಾಗ ಅವನ ಓವ್ಹರ ಕೋಟಿನ ಕಿಸೆಯೊಳ ಗಿಂದ ಇದು ಬಿದ್ದಿರಬಹುದೆಂದು ಗಾರ್ಬಿಯು ತರ್ಕಿಸಿ ಓವ್ಹರ ಕೋಟಿನ ತರುಣನನ್ನು ನೋಡಲು ಹುಡುಕಹತ್ತಿದನು. ಟಾಂಗಾನಿಲ್ದಾಣದ ಹತ್ತರ ಒಂದು ವ್ಯಕ್ತಿ ನಿಂತಿದ್ದು ಕಂಡು ಆಚೆಗೆ ಸಾಗಿದನು.

ತರುಣನ ಸನಿಯಕ್ಕೆ ಬಂದು ಗಾರ್ಬಿಯು ನುಡಿದನು. "ರಾಯರ, ನಿಮ್ಮ ಸಾಬಾನು ತಗೊಳ್ರಿ, ನೀವು ಕೂಡ್ರೋ ಕಾಲಕ್ಕ ನಿಮ್ಮ ಕಿಸೆದೊಳ ಗಿಂದ ಇದು ಬಿದ್ದಿದ್ದೀತು. ನೀವು ಹೋದನ್ಯಾಲೆ ನಾ ಅದನ್ನು ನೋಡ್ದೆ. ಈ ವಾರದಾಗ ನಿಮ್ಮ ಭವಿಷ್ಯ ನೆಟ್ಗ ಥ್ಹಾಂಗ ಕಾಣ್ಲೆಲ್ಲ. ಆದರೂ ನಿಮಗ ಕೈಗಡ ಬೇಕೂ ಅಂತ ಅಂದಿದ್ರೆಲ್ಲ. ಈ ಒಂದು ಸಾವ್ರೀನು ತಗೊಳ್ರಿ....''

ತರುಣನು ಅವೆರಡನ್ನೂ ತೆಗೆದುಕೊಂಡು ಕಿಸೆಯಲ್ಲಿಟ್ಟುಕೊಂಡನು.

"ಇದು ನನ್ನ ವ್ಹಿಜಿಟಂಗ ಕಾರ್ಡ" ಗಾರ್ಬಿಯು ಮುಂದರಿಸಿದನು. ''ಈ ವಾರದೊಳಗಾಗಿ ನನ್ನ ದುಡ್ಡು ನನಗ ಕೊಡ್ರಿ ಶೀರ್ತು, ಸಾಬಾಣಾ ಮಾತ್ರ ಇನ್ನೊಮ್ಮೆ ಕಳಕೋ ಬ್ಯಾಡ್ರೀ!"

'' ಸಾಬಾನು ಸಿಕ್ಕದ್ದು ನನ್ನ ಸುದೈವವೆಂದೇ ಹೇಳಬೇಕು" ತರುಣನು ಗಾರ್ಬಿಗೆ ತಾನು ಬಹಳ ಋಣಿಯಾಗಿರುವೆನೆಂದು ಹೇಳಿ ನಾಇಟ್ಸ ಬ್ರಿಜ್ಜದ ಕಡೆಗೆ ಭರದಿಂದ ಧಾವಿಸಿದನು.

"ಹುಡುಗ! ಎಷ್ಟ ಸಣ್ಣ ಮಾತ್ಗೆ ಎಷ್ಟು ಮನಸಿಗೆ ಹಚಗೋತಾನ, ಏನೇ ಆಗ್ಲಿ ಬಾಹಾಡಂಬರದಿಂದ ಮನುಷ್ಯನ ಸ್ಥಿತಿಗತಿಯನ್ನು ನಿರ್ಣಯಿಸ ಬಾರದೆಂಬುದು ಇವತ್ತ ನನಗ ಗೊತ್ತಾಯಿತು." ಹೀಗೆ ಯೋಚಿಸುತ್ತ ಗಾರ್ಬಿಯು ತಾನು ಕುಳಿತ ಬೆಂಚದ ಮುಂದೆ ಹಾಯ್ದು ಮನೆಗೆ ಸಾಗಿದನು. ಅಲ್ಲಿ ಹೋಗುವಾಗ ಬೆಂಚದ ಕಡೆಗೆ ಅವನ ದೃಷ್ಟಿ ಹೋಯಿತು. ಅಲ್ಲಿ ತರುಣನಕಿಂತ ಮೊದಲು ಬಂದು ಕುಳಿತು ಹೋದ ಮುದುಕನು ಏನೋ ಹುಡುಕುತ್ತ ನಿಂತಿದ್ದನು.

"ಯಾಕ್ರೀ, ಏನು ಹುಡುಕ್ತೀರಿ?" ಗಾರ್ಬಿಯು ನುಡಿದನು.

"ಸಾಬಾನದ ಒಡೀ ಹೋಗೇದ್ರೀ!"

## ಸತಿ ಸಾವಿತ್ರಿ

ಬೇಸಿಗೆಯ ಮಧ್ಯಾಹ್ನ, ಊಟ ಮುಗಿಸಿ ತನ್ನ ಮಟ್ಟಿಗೆಂದು ತಾನು ತಿಳಿದಿರುವ ತನ್ನ ಮನೆಗೆಲಸಗಳನ್ನು ತೀರಿಸಿಕೊಂಡು ಸಾವಿತ್ರಿಯು ಅಟ್ಟದ ಮೇಲಿನ ತನ್ನ ಕೋಣೆಗೆ ಬಂದಳು. ಕುರ್ಚಿಯಲ್ಲಿ ತುಸು ವಿಶ್ರಮಿಸಿದಳು. ಹಾಸಿಗೆ ಮೇಲೆ ಉರುಳಾಡಿದಳು. ಪುಸ್ತಕವೊಂದನ್ನು ಎತ್ತಿ ಪಾನುಗಳನ್ನು ತಿರುವಿ ಹಾಕಿದಳು. ಏನು ಮಾಡಿದರೂ ವೇಳೆ ಹೋಗಲೊಲ್ಲದು. ಈ ದಿನ ಇಷ್ಟೇಕೆ ಜಡವಾಗಿದೆಯೋ! ಕಿಡಿಕೆಗೆ ಹಾಕಿದ ಪರದೆಯನ್ನು ತೆರೆದು ಹೊರಗೆ ನೋಡಿದಳು. ಬಿಸಿಲಿನ ಪ್ರಚಂಡ ಬೆಳಕು, ಪ್ರಚಂಡ ಉರಿ, ಬೀದಿಯಲ್ಲಿ ಯಾರೂ ಕಾಣಿಸಲೊಲ್ಲರು. ಪೂರ್ಣ ಬರಿದು. ತನ್ನ ಮನಸ್ಸೂ ಇಂದು ಬರಿದಾಗಿದೆ. ಅಲ್ಲೊಂದು ಇಲ್ಲೊಂದು ಗುಬ್ಬಿಗಳ ಕಿಲಿಕಿಲಾಟವೂ ಆಗಾಗ ಕೇಳಬರುತ್ತಿರುವದು. ದೂರದಲ್ಲಿ ಬಿಸಲಿನತಾಪಕ್ಕೆ ನೆರಳು ಹುಡುಕಿ ಸಿಗಲಾರದೇ ನಿರಾಶೆಯಿಂದಬೆಂಡಾಗಿ ಕುಂಯ್ಗುಡುವ ನಾಯಿಯ ನರಳುವ ಧ್ವನಿಯೂ ಕೇಳುವದು. ಸಾವಿತ್ರಿಯು ಪರದೆಯನ್ನು ಪೂರ್ಣ ಎಳೆದಳು. ಹಣೆಯ ಮೇಲೆ ಎದ್ದ ಬೆವರಿನ ಮುತ್ತುಗಳನ್ನು ತನ್ನ ಶುಭ್ರವಾದ ಪತ್ತಲದ ಸೆರಗಿನಿಂದ ಒರೆಸಿಕೊಂಡಳು.

ಅತ್ತಿಗೆಯು ಕೂಡ ತುಸು ಹರಟಿಕೊಟ್ಟಿದರಾಯಿತೆಂದು ಕೆಳಗಿಳಿದು ಹೋದಳು. ಅಡಿಗೆಯ ಮನೆಗೆ ಹೋದಳು. ಅತ್ತಿಗೆ ಅಲ್ಲಿರಲಿಲ್ಲ. ಬಚ್ಚಲು ಮನೆಗೆ ಹೋದಳು. ಅಲ್ಲಿಯೂ ಅವಳಿರಲಿಲ್ಲ. ಅವಳ ಕೋಣೆಗೆ ಹೋಗಿ ಮುಂದಕ್ಕೆ ಮಾಡಿದ ಬಾಗಿಲಿನ್ನು ಮೆಲ್ಲನೆ ತೆರೆದಳು. ಅತ್ತಿಗೆಯು ಮಂಚದ ಮೇಲೆ ಮಲಗಿ ನಿದ್ರಿಸುತ್ತಿದ್ದಾಳೆ. ಸದ್ದು ಮಾಡದೇ ಸಾವಿತ್ರಿಯು ಬಾಗಿಲನ್ನು ಮತ್ತೆ ಮುಂದಕ್ಕೆ ಮಾಡಿಕೊಂಡು ತನ್ನ ಕೋಣೆಗೆ ತೆರಳಿದಳು.

ದಾರ ಸೂಜೇನು ತೆಗೆದುಕೊಂಡು ಹೆಣಿಕೆ ಹಾಕುತ್ತ ಕುಳಿತಳು ಹೊತ್ತೊಂದು ಹೋಗಬೇಕಲ್ಲ! ಹೆಣಿಕೆಯು ಭರದಿಂದ ಸಾಗಿತು. ಚಪಲ ವಾದ ಬೆರಳುಗಳು ಹೆಣೆಯ ಹತ್ತಿದವು. ಕಣ್ಣುಗಳು ಅದರ ಕಡೆಗಿದ್ದವು.

ಎಷ್ಟು ನಿಶ್ಚಿಂತ ವ್ಯಕ್ತಿಯು ಅತ್ತಿಗೆಯು! ಎರಡು ಗಂಟೆಯೊಳಗಾಗಿ ಮನೆಗೆಲಸ ತೀರಿಸಿಕೊಂಡು ಮಲಗಿ ಬಿಟ್ಟಿದ್ದಾಳೆ. ನಿದ್ರೆ ಹತ್ತೇ ಹೋಯಿತು. ತನ್ನ ಕೋಣೆಯನ್ನು ಬಹಳ ಓರಣದಿಂದ ಇಟ್ಟು ಕೊಂಡಿದ್ದಾಳೆ. ಆ ಗೋಡೆಗೆ ಮೇಜು ಎರಡು ಕುರ್ಚಿಗಳಿವೆ. ಒಂದು ತನಗೆ ಒಂದು ಅಣ್ಣ (ತನ್ನ ಪತಿ) ನಿಗೆ ಮೇಜಿನ ಮೇಲೆ ತಾನೇ ಹೆಣೆದ ಹೆಣಿಕೆಯ ವಸ್ತ್ರವನ್ನು ಹಾಸಿದ್ದಾಳೆ. ಈಚೆಯ ಗೋಡೆಗೆ ಪಲ್ಲಂಗವಿದೆ ಅದರ ಹತ್ತರ ತಲೆಗಿಂಬಿನ ಕಡೆಗೆ ಒಂದ ಚಿಕ್ಕ ದುಂಡನ್ನ ಮೇಜಿದೆ. ಅದೂ ಒಂದು ವಸ್ತ್ರವನ್ನು ಮುಸುಕು ಹಾ ಕೊಂಡಿದೆ. ದೀಪವನ್ನಿಡಲು ಅದನ್ನು ಉಪಯೋಗಿಸುತ್ತಿರಬಹುದು, ಅಥವಾ ಅಣ್ಣನು ರಾತ್ರಿ ನೀರು ಕುಡಿಯುವನು, ಅವನಿಗಾಗಿ ತಂಬಿಗೆ ಥಾಲಿ ಯನ್ನಿಡಲು ಇದ್ದಿರಬಹುದೇ...... ಪಲ್ಲಂಗದ ಮೇಲಿನ ಎರಡು ಗಾದಿಗಳ ಮೇಲಿನ ಬಿಳಿಯ ವಸ್ತ್ರಗಳು ಶುಭ್ರವಾಗಿವೆ. ತಲೆದಿಂಬುಗಳೆರಡು Good Night, Sweet Dreams. ಎಂಬ ಶಬ್ದಗಳನ್ನು ಹೊತ್ತಿವೆ. Good Nightದ ತಲೆಗಿಂಬನ್ನು ಅತ್ತಿಗೆಯು ಇಟ್ಟುಕೊಂಡು ಮಲಗಿದ್ದಾಳೆ. ಆದರೂ ಅವಳ ನೀಳವಾದ ನಿಂಬೀ ಬಣ್ಣದ ದುಂಡನ್ನ ತೋಳನ್ನು ತಲೆ ಮತ್ತು ದಿಂಬಿನ ನಡುವೆ ಇಟ್ಟು ಕೊಂಡಿದ್ದಾಳೆ. ಒಂದೇ ಸಮನಾದ ಉಸಿ ರಾಡಿಸುವಿಕೆಯು ಅವಳ ಮನಸ್ಸಿನ ಶಾಂತತೆಯನ್ನು ತೋರುವದು ಮೊಗದು ಕಳೆಯು ಜೀವನದಲ್ಲಿಯ ತೃಪ್ತಿಯನ್ನು ಒಡಮೂಡಿಸಿದೆ. ಮೈಮೇಲೆ ಏನೂ

ಹೊದ್ದುಕೊಳ್ಳದೇ ಮಲಗಿದ್ದಾಳೆ. ಸಲಕ್ಷಣ ಮೂರ್ತಿ.... ದೇವಿಯಂತೆ.... ಲಕ್ಷ್ಮಿಯಂತೆ.......

ನಿಜ, ಅವಳು ನಿಜವಾಗಿಯೂ ಲಕ್ಷ್ಮಿ. ಅಣ್ಣನ ಲಕ್ಷ್ಮಿ. ಈ ಮನೆಗೆ ಭಾಗ್ಯಲಕ್ಷ್ಮಿ. ಆದರೆ ತಾನು? ತಾನೂ ಒಂದು ಮನೆಗೆ ಭಾಗ್ಯ ಲಕ್ಷ್ಮಿಯಾಗಿ ಹೋಗುವವಳೇ! ಆದರೆ ಆ ಭಾಗ್ಯ ಬರಬೇಕಾದರೆ ಎಷ್ಟು ದಿವಸ ಗಳು ಜಾರಿದವಲ್ಲ. ಸಾವಿತ್ರಿಗೆ ಈಗ ೨೦ ವರುಷ. ಇನ್ನೂ ಲಗ್ನವಾಗಿಲ್ಲ. ತಂದೆ ಇರುವಾಗ ಆಗಿದ್ದರೆ ಆಗಿ ಹೋಗಬೇಕಾಗಿತ್ತು. ಆಗ ತಾನು ಕಲಿಯುವೆ ನೆಂದೂ, ಲಗ್ನ ಬೇಡವೆಂದೂ ಹಟ ಹಿಡಿದದ್ದರಿಂದ ತಂದೆಯವರು ಮಗಳ ಮನಸ್ಸು ಮುರಿಯಲು ಮನಸ್ಸು ಮಾಡಲಿಲ್ಲ.

ತಾಯಿ ತಂದೆಗಳಿಗೆ ಇವರಿಬ್ಬರೇ ಮಕ್ಕಳು. ಅಣ್ಣಾ ಮತ್ತು ಸಾವಿತ್ರಿ. ಅಣ್ಣನು ಸಾವಿತ್ರಿಗಿಂತ ಆರುವರುಷಕ್ಕೆ ಹಿರಿಯನು. ಒಬ್ಬಳೇ ಒಬ್ಬ ಮಗ ಳಾದ್ದರಿಂದ ಸಾವಿತ್ರಿಯು ಮನೆಯಲ್ಲಿ ಮಮತೆಯ ಮಗುವಾಗಿ ಬೆಳೆದಳು. ಎಲ್ಲರೂ ಇವಳ ಮನಸ್ಸಿನಂತೆಯೇ ವರ್ತಿಸತೊಡಗಿದರು. ತನ್ನ ಮನಬಂದ ದ್ದನ್ನೇ ನಡೆಸುತ್ತಿದ್ದ ಸಾವಿತ್ರಿಗೆ ಅದೇ ಒಂದು ಸ್ವಭಾವವಾಗಿ ಬಿಟ್ಟಿತು. ಕನ್ನಡ ನಾಲ್ಕನೆಯ ಇಯತ್ತೆ ಮುಗಿಸಿ ಇಂಗ್ಲೀಷ ಶಾಲೆಯನ್ನು ಪ್ರವೇಶಿಸು ತ್ತಲೇ ತಾನೊಬ್ಬ ವಿದ್ಯಾವತಿಯಾದ ಹೆಂಗಸೆಂದು ಸಾವಿತ್ರಿಯು ತಿಳಿದು ಬಿಟ್ಟಳು.

ಇಂಗ್ಲೀಷ ಐದನೆಯ ಇಯತ್ತೆಯಲ್ಲಿರುವಾಗಿನಿಂದಲೇ ಸಾವಿತ್ರಿಯು ಶಾಲೆಯಲ್ಲಿಯ ವಾಕ್ ಸ್ಪರ್ಧೆಗಳಿಗೆ ಹೋಗತೊಡಗಿದಳು. "necessity of female Education". "Position of a Hindu Girl in society" ಮೊದಲಾದ ಭಾಷಣಗಳನ್ನು ಕೇಳಿ ಮನೆಗೆ ಬಂದು ತಂದೆಯ ಮುಂದೆ ಅದೇ ವಿಚಾರವನ್ನು ಹೇಳುತ್ತಿದ್ದಳು.

"ಗಂಡಸರು ಹೆಂಗಸರನ್ನು ಗುಲಾಮರಂತೆ ನಡೆಯಿಸಿಕೊಳ್ಳುವರು."

"ತಮ್ಮಂತೆ ಹೆಂಗಸರಿಗೂ ಆತ್ಮ, ಅಂತಃಕರುಣೆಗಳು ಇರುವವೆಂಬು ದುಕೂಡ ಗಂಡಸರು ತಿಳಿಯಲು ಸಿದ್ಧರಿಲ್ಲ" "ತಮ್ಮ ಸುಖದ ವಸ್ತು

ಸ್ತ್ರೀ, ಎಂದು ಅವರು ನಂಬಿದ್ದಾರೆ” “ ನಮ್ಮ ಸ್ವಾತಂತ್ರ್ಯವನ್ನು ನಾವು ಗಳಿಸಬೇಕು ” “ ಗಂಡಸಿನಷ್ಟೇ ಹೆಂಗಸು ಜೀವನದಲ್ಲಿ ಅಧಿಕಾರಿಯೆಂಬುದನ್ನು ಅವರಿಗೆ ಹೇಳಬೇಕು ” “ ಗಂಡಸರು ನೀಚರು........ ಹಾಗೆ, ಹೀಗೆ, ಎಂದು ವೀರಾವೇಶದಿಂದ ಸಾವಿತ್ರಿಯು ಹೇಳುವಾಗ ಅವಳ ಪುಟ್ಟ ಬಾಯಿಯಿಂದ ಹೊರಟ ಮಧುರವಾದ ಶಬ್ದಗಳಿಗೆ ಮೋಹಿತರಾಗಿ ತಂದೆಯುವರು ಮನಃಪೂರ್ವಕವಾಗಿ ನಗುವರು. ಅಲ್ಲಿಯೇ ಹತ್ತಿರದಲ್ಲಿ ನಿಂತ ತಮ್ಮ ಹೆಂಡತಿಯನ್ನುದ್ದೇಶಿಸುವರು, “ಕೇಳಿದೇನs ನಿನ್ನ ಪ್ರಚಂಡ ಮಗಳ ಲೆಕ್ಚರೂs ....

“ ಸಾಕು ಸುಮ್ಮನಿರ್ರಿ ದ್ರಿಷ್ಟಿ ಆದೀತು ಕೂಸಿಗೆ ” ಎಂದು ತಾಯಿಯು ನುಡಿದು ಸಾವಿತ್ರಿಯನ್ನು ಎದೆಗವಚಿಕೊಂಡು ಆವೇಶದಿಂದುಟಾದ ಅವಳ ಕೆಂಪೇರಿದ ಮೋಗವನ್ನು ತನ್ನ ಸೆರಗಿನಲ್ಲಿ ಬಚ್ಚಿಡುವಳು. “ನಾ, ಕೂಸೇನು ? ಕೂಸಂತ, ತಿಳೀಬ್ಯಾಡ್ರಿ. ನಮ್ಮ ಸಮಾಜದಾಗ ಸ್ತ್ರೀ ಸ್ಥಾನಮಾನಗಳನ್ನು ಸ್ಥಾಪಿಸಿ ಈ ನೀಚ ಗಂಡಸರನ್ನ ಸದೆಬಡೆಯದಿದ್ರ.......... ”

ಇವು ಮೊದಲಿಗೆ ವಿನೋದದ ಮಾತುಗಳಾದರೂ ಸಾವಿತ್ರಿಯು ವಯಸ್ಸಿಗೆ ಬರುವಹೊತ್ತಿಗೆ ಅವಳ ಹೃದಯದಲ್ಲಿ ಪೂರ್ಣ ಬೇರೂರಿದವು. Matric ಪರೀಕ್ಷೆಯಾದ ಮೇಲೆ ಮಗಳ ಲಗ್ನ ಮಾಡಿದರಾಯಿತೆಂದು ತಂದೆಯುವರು ಸುಮ್ಮನಿದ್ದರು. ಸಾವಿತ್ರಿಯ ತನ್ನ ೧೬ನೇ ವಯಸ್ಸಿಗೆ Matric ಪಾಸಾದಳು. ಕಾಲೇಜಕ್ಕೆ ಹೋಗಬೇಕೆಂದಳು. ತಂದೆಯುವರು ಒಪ್ಪಲಿಲ್ಲ. ಹಟ ಹಿಡಿದಳು. ಬಹಳ ಹಟಮಾಡಿದಳು. ಬಗೆಹರಿಯಲಿಲ್ಲ. ತಂದೆಯವರು ವರಾನ್ವೇಷಣೆ ಮಾಡತೊಡಗಿದರು. ತಾನು ಲಗ್ನವಾಗುವದಿಲ್ಲವೆಂದೂ ಆಜನ್ಮ ಬ್ರಹ್ಮಚಾರಿಯಾಗಿ ಉಳಿದು ಸ್ತ್ರೀ ಸಮಾಜದ ಉನ್ನತಿಗಾಗಿ ಹೋರಾಡುವೆನೆಂದೂ ತಂದೆಗೆ ಹೇಳಿ ಬಿಟ್ಟಳು.

ಇವಳ ಮಾತಿಗೆ ತಂದೆಯುರು ಎಷ್ಟೂ ಲಕ್ಷಗೊಡಲಿಲ್ಲ. ವರಾನ್ವೇಷಣೆ ನಡೆಸಿದರು. ಆದರೆ ಒಬ್ಬರೂ ಅವಳನ್ನು ಲಗ್ನವಾಗಲು ಒಪ್ಪಲಿಲ್ಲ. “ ಇಷ್ಟು ಕಲಿತ ಹುಡುಗಿ ನಮಗ ಉಪಯೋಗಿಲ್ಲ “ ಎಂದು ಒಬ್ಬರೆಂದರೆ. “ನಮ್ಮ ಮಗ ನಾಜೂಕು, ಹುಡುಗಿ ದೊಡ್ಡಾಕಿ ಆಗ್ತಾಳ” ಎಂದರೊಬ್ಬರು

"ಉದ್ಧಟ ಹುಡುಗಿ" ಎಂದು ಬೆದರಿದವರು ಬಹಳ ಮಂದಿ. "ಮನ್ಯಾಗ ಅಡಿಗಿ ನೀರು, ಈಕಿನ್ನ ಕೂಡಿಸಿ ಸಾವೇ ಮಾಡಬೇಕೋಃ" ಎಂದು ಹುಬ್ಬು ಏರಿಸಿದವರೂ ಇದ್ದರು. "ಗಂಡಘಳಿಸಿದ್ದೆಲ್ಲಾ ಈಕಿ ಪೇಸಪಾವುಡರೂ, ಸಂಜೀವರ್ತಮಾನ ಪತ್ರಕ್ಕೇಃ ಹೋದಾವ್ರಪಾ!" ಎಂದು ಕೆಲವರು ವಿನೋದ ಮಾಡಿದರು.

ಆಡುವವರಿಗೇನು? ವಿನೋದವೇ ಸರಿ. ಹಡೆದ ತಂದೆ ತಾಯಿಗಳ ಮನದ ವೇದನೆಯನ್ನು ಹೆಣ್ಣು ಹಡೆದವರೇ ಬಲ್ಲರು. ತಂದೆಯು ಬಹಳ ದುಃಖಪಟ್ಟರು. ತಾಯಿಯು ಕಣ್ಣೀರುಸುರಿಸಿದಳು.

ಹೆರವರು ತನ್ನ ವಿಷಯಕ್ಕೆ ಆಡುವ ಮಾತುಗಳನ್ನು ತಾಯಿಯಿಂದ ಸಾವಿತ್ರಿಯು ತಿಳಿದುಕೊಂಡಳು. "ನೀ ಕಲೀದಿದ್ರ ಛಲೋ ಆಗ್ತಿತ್ತು ನೋಡು. ಕಲ್ತ ಹೆಣ್ಣು ಒಲ್ಲೇಃ ಅಂತಃ ಅಂತಾರ ಎಲ್ಲಾರು" "ಮತ್ತ ಕಲಿಸದೇ ಇದ್ರ ಯಾಕ್ರಿ ನಿಮ್ಮ ಹುಡಿಗ್ಗೆ ಇಂಗ್ಲೀಷ ಬರುದಿಲ್ಲೇನು? ಬರೇ ಕನ್ನಡ ಕಲಿಸೀರಿ? ಅದು ಬರುದೂಲ್ಲೇನು? ಇದು ಬರೂದುಲ್ಲೇನು? ಅಂತ ಇದಃ ಗಂಡಸರು ಕೇಳತಾರಲ್ಲ! ಅದಕ್ಕೇನಂತೀ?" ಸಾವಿತ್ರಿಯನ್ನುವಳು.

"ಹೌದವ್ವಾ ಅದೂ ಕಠಿಣ"

"ಕಠಿಣ ಅದು ಅಲ್ಲ. ಗಂಡಸರ ಹೃದಯ ಅಷ್ಟು ಕಠಿಣ" ಎಂದು ಸಾವಿತ್ರಿಯು ಹಲ್ಲು ಕಟಿದು ತನ್ನ ಕೋಣೆಗೆ ಹೋಗುವಳು.

× × × ×

"ಅಕ್ಕಾ (ಸಾವಿತ್ರಿಗೆ ಅವಳ ಅತ್ತಿಗೆಯು ಕರೆಯುವನಾಮ) ಎಷ್ಟೊತ್ತು ಕ್ವಾಣ್ಯಾಗ ಕೂತೀರಿ. ನಾಲ್ಕು ಹೊಡೀತು. ಚಹ ಬ್ಯಾಡೇನು?" ಎನ್ನುತ್ತ ಅತ್ತಿಗೆಯು ಎರಡು ಕಪ್ಪು ಚಹ ಹಾಕಿಕೊಂಡು ಸಾವಿತ್ರಿಯ ಕೋಣೆಯೊಳಗೆ ಬಂದಳು. ಒಂದು ಕಪ್ಪು ಸಾವಿತ್ರಿಗೆ ಕೊಟ್ಟಳು. ತಾನೊಂದನ್ನು ಹಿಡಿದು ಅಲ್ಲಿಯೇ ಖುರ್ಚಿಯಲ್ಲಿ ಕುಳಿತುಕೊಂಡಳು.

"ನಾಕು ಹೊಡೆದದ್ದು ನನಗ ಗೊತ್ತಃ ಆಗಲಿಲ್ಲ" ಎಂದು ನಗುತ್ತ ಸಾವಿತ್ರಿ ಕುಡಿಯತೊಡಗಿದಳು. ಅತ್ತಿಗೆಯೂ ಪ್ರಾರಂಭಿಸಿದಳು

"ಏನು ಬಿಸಲಿದು" "ಭಯಂಕರ ಬಿಸಿಲು ನನಗಂತು ಹೊತ್ತೇ ಹೋಗವಲ್ದು" "ನನಗಾರ ಏನ!" "ನಿಮ್ಮ ಮಾತು ಬ್ಯಾರೆ. ನಾಳೆ ಆಗೋದು ಹೋಗೋದು ಆವ...... ಅವರ ಯೋಚನೀ ಮಾಡಿ ಕೋತ ಕೂತೀರಿ ನನಗೊತ್ತದ" ಎಂದು ಅತ್ತಿಗೆಯು ವಿನೋದ ಮಾಡಿದಳು. ಸಾವಿತ್ರಿಯು ಬಹಳ ನಾಚಿದಳು. "ನಿಮ್ಮದು ಇಲ್ಲಿಗೇ ಮುಗಿಯಿತೇನು? ಏನಿಲ್ಲ. ಅಣ್ಣ ಅವ್ವ ಊರಿಂದ ನಿನ್ನೆ ಬರಬೇಕಾಗಿತ್ತು ಯಾಕ ಬರಲಿಲ್ಲ " ಅಂತ ಯೊಚನೀವಳಗ ನೀವು ಇದ್ದೀರಿ. ಅವನ್ನ ನನ್ನ ಮ್ಯಾಲೆ ಹಾಕ್ತೀರೇನು" ಕಪಟ ಕೋಪೀಭವದಿಂದ ನುಡಿದಳು." "ಹೌದು ಬಾಯೀ, ನನಗ ಭಾಳಯೋಚನ್ಯಾಗೇದ, ಯಾಕ ನಿಂತಿದ್ದಾರಾದೀತ? ನನಗಂತೂ ಮಧ್ಯಾನ್ಹದಾಗ ಅನ್ನ ಗಂಟಲದಾಗ ಇಳಿಯಲಿಲ್ಲ" ಅತ್ತಿಗೆಯು ಸಹಜವಾದ ಅಂತಕರುಣೆಯಿಂದ ನುಡಿದಳು.

ಸಾವಿತ್ರಿಯು ನಕ್ಕಳು. ಎಷ್ಟದು ಮೋಹ. ಈ ಮೋಹದ ಬಲವಾದ ಕಟ್ಟಿನಲ್ಲಿ ಸಿಕ್ಕಬಿದ್ದ ಹೆಣ್ಣುಗಳು ಈ ರೀತಿ ನರಳುವವೇನೋ ಎಂದಂದುಕೊಂಡು ನಕ್ಕಳು. ನಿನ್ನೆಯೇ ಬರತಕ್ಕ ಅಣ್ಣನು ಬರಲಿಲ್ಲವಾದುದರಿಂದ ಅತ್ತಿಗೆಯ ಗಂಟಲಲ್ಲಿ ಇಂದು ಅನ್ನ ಇಳಿಯಲಿಲ್ಲ. ತಾನು ವಿನೋದವಾಡಿದ ಮಾತುಗಳನ್ನು ಅತ್ತಿಗೆಯು ನಿಜವೆಂದು ತಿಳಿದು ತನ್ನ ಹೃದಯವನ್ನೇ ಸಾವಿತ್ರಿಯ ಮುಂದೆ ಬಿಚ್ಚಿಟ್ಟಳು. ಈ ವಿಷಯವನ್ನು ಇನ್ನಷ್ಟು ಎಳೆದಿದ್ದರೆ, ಅತ್ತಿಗೆಯ ಕಣ್ಣಿಂದ ಪಟಪಟನೇ ನೀರುಗಳು ಉದುರುತ್ತಿದ್ದವೆಂದು ಸಾವಿತ್ರಿಗನಿಸಿತು. ಸಾವಿತ್ರಿಯು ಒಳ್ಳೆ ಅಭಿಮಾನದಿಂದ ನಕ್ಕಳು. ತನ್ನ ಅಣ್ಣನನ್ನು ಸದಾ ಕಾಪಾಡಲು ಬಹು ದೊಡ್ಡ ಮನಸ್ಸಿನ ಒಬ್ಬ ಹೆಂಗಸು ಈ ಮನೆಗೆ ಬಂದಿದ್ದಾಳೆ! ಎಂಬ ಸಮಾಧಾನದಿಂದ ನಕ್ಕಳು.

ಆ ಕರ್ತವ್ಯವನ್ನು ಅತ್ತಿಗೆಯು ಮಾಡುತ್ತಿದ್ದಾಳೆ.

ಹಾಗೆ ನೋಡಿದರೆ ಅತ್ತಿಗೆಯ ಮನಸ್ಸಿನ ಘನತೆಯೇನು? ಪ್ರತಿಯೊಬ್ಬ ಹೆಂಗಸು ಗಂಡನನ್ನು ಸಂರಕ್ಷಿಸಬೇಕು. ಪೋಷಿಸಬೇಕು. ಅದು ಹೆಂಗಸಿನ ಕರ್ತವ್ಯ. ತಾನೂ ಒಬ್ಬ ಹೆಂಗಸು, ಆದರೆ ತಾನು ಇನ್ನೂ ಯಾರ ಪಾಲಕಳೂ ಆಗಿಲ್ಲ. ಒಂದು ಮನೆಯಲ್ಲಿ ಅಥಿತಿಯಂತೆ ಇದ್ದು ಬಿಟ್ಟಿದ್ದಾಳೆ. ತಾನು ಈರೀತಿ ಅಥಿತಿ ಎಂಬ ಜ್ಞಾನವು ಅವಳಿಗಾದಾಗಿನಿಂದ ಅವಳು ದುಃಖಿಯಾಗಿ

ದ್ದಾಳೆ. ಮೊದಲಿನಂತೆ ಹಕ್ಕಿ ಹಾರಾಡಿದಹಾಗೆ ಇರಬಾರದಾಗಿತ್ತೇ, ಗಾಳಿ ಯಲ್ಲಿ ಸ್ವೇಚ್ಛಾ ಚಾರಿಯಾಗಿ ತಿರುಗಾಡಬಾರದಿತ್ತೇ..........

ಅಂದಿನ ದಿನವೇ ಕೆಟ್ಟದಿನ. ಆ ದಿನ ಎಲ್ಲವೂ ವಿಪರೀತವಾಗಿಯೇ ಪರಿಣಮಿಸಿದವು. ಸಾವಿತ್ರಿಗೆ ಸಿನೆಮಾಕ್ಕೆ ಹೋಗಬೇಕೆಂಬ ಬುದ್ಧಿ ಯಾದದ್ದೇ ಈ ತಿಳುವಳಿಕೆಯ ಮೂಲ, ತಾನೊಬ್ಬಳೇ ಹೋಗಿದ್ದರೂ ಆಗು ತ್ತಿತ್ತು. ಆ ದಿವಸ ಸಿನೆಮಾಕ್ಕೆ ಅಣ್ಣನನ್ನು ಎಬ್ಬಿಸಿದಳ. ಅತ್ತಿಗೆಯನ್ನೂ ಹುರುದುಂಬಿಸಿದಳು. ಇಂಗ್ಲೀಷ ಚಿತ್ರಪಟಕ್ಕೆ ಎಲ್ಲರೂ ಹೋದರು. ನೋಡಿ ವಾಪಸು ಮನೆಗೆ ಬಂದರು ಊಟವಾಗಿ ಮಲಗಿದರು. ಸಾವಿತ್ರಿಗೆ ಏಕೋ ನಿದ್ರಿಯೇ ಬರಲಿಲ್ಲ. ಸಿನೇಮಾ ನೋಡಿದ ಪರಿಣಾಮವೋ, ನಿದ್ರೆಯಹೊತ್ತು ಮೀರಿದ್ದರಿಂದಲೋ, ತಲೆಯಲ್ಲಿಯ ಅನೇಕ ವಿಚಾರಗಳ ತಾಕಲಾಟದಿಂ ದಲ್ಲೋ, ಅಂತೂ ನಿದ್ರೆ ಬೇಗಹತ್ತಲಿಲ್ಲ. ನೀರಡಿಕೆಯಾದಂತಾಯಿತು. ಎದ್ದು ಅಡಿಗೆಯ ಮನೆಗೆ ಹೊರಟಳು. ಹೋಗುವಾಗ ಅಣ್ಣನ ಕೋಣೆಯಿಂದ ಏನೋ "ಗುಜುಗುಜು" ಮಾತು ಕೇಳಿದವು. ಕುತೂಹಲದಿಂದ ಬಾಗಿಲಿಗೆ ಕಿವಿಯನ್ನಿಟ್ಟಳು,

"ಏನಿದು ಅಸಹ್ಯ ಎಲ್ಲಾರೇ!" "ಯಾಕ ಏನಾತು?" "ಇನ್ನೇನಾಗ ಬೇಕು. ಹೆಂಗಸರ ಮಾನ ಮರ್ಯಾದೀ ತೂರ್‍ಯಾಡಿ ಹೋತು. ಸಿನೇಮಾ ದಾಗ. ಝಂಗಾ ಪ್ಯಾಲೇರಿಸಿಕೊಂಡು ಕುಣಿತಾವೇನು! ಮಲೀ ಏನು ಬಿಟ್ಟಾವ......." ಅಣ್ಣನು ನಕ್ಕನು. "ಇದನ್ನs ನೋಡಲಿಕ್ಕೆ ಹೋಗ್ತಿರಿ ಕಾಣ್ತದ ನೀವು, ಗಂಡಸರ! ನಾಚಿಕಿ ಹ್ಯಾಂಗಬರುದುಲ್ಲೊ! ಮುದ್ದು ಏನ್ನ ಕೊಡತಾವ" ನಾಟಕಾ ಸಿನೆಮಾ ಅಂದರ ಜೀವನದ ಪ್ರತಿಬಿಂಬ. ಇಲ್ಲೇ ನಡsಅದನ್ನs ಸಿನೆಮಾದಾಗ ತೋರಸ್ತಾರ. ನಡೆಯುವದು ನಾಚಿಗ್ಗಲ್ಲ. ಅದನ್ನ ನಾಟಕಾ ಮಾಡಿ ತೋರಿಸೋದು ಮಾತ್ರ ನಾಚಿಕೆ ಕಾಣಸ್ತದ" " ನಿಮ್ಮ ತಂಗಿಗೆ ಇನ್ನೂ ಲಗ್ನ ಆಗಿಲ್ಲ. ಆಕೀಗೆ ಏನ ಅನಸೀತು ಏನ ತಿಳಕೊಂಡಾಳು! ಥೂ, ಥೂ" "ಥು ಥೂ ಇಲ್ಲ ಗೀಥೂ ಇಲ್ಲ. ನಡಿಯೋದತ ಅದು ಹಿಂಗs" "ನಡೀಲಿ ಮರಾಯರೇ ಅದು ಬೇಕಾದ್ರ! ನಾ ಅಂತು ಇನ್ನ ಮ್ಯಾಲೆ ಇಂಗ್ರೇಜೀ ಸಿನೇಮಾಕ್ಕೆ ಬರೂದುಲ್ಲ. "ಬರದೇ ಇದ್ರ ನಾ ಬಿಡೂದೂಲ್ಲ" ಇಬ್ಬರೂ ನಗೆಯಲ್ಲಿ ತೇಲಾಡಿದರು, ಸಾವಿತ್ರಿಯು ಅಡಿಗೆಯ

ಮನೆಗೆ ಹೋಗಿ ನೀರು ಕುಡಿದು ತನ್ನ ಕೋಣೆಗೆ ತೆರಳಿದಳು ಮಲಗಿದಳು.

ಇಡೀ ರಾತ್ರಿ ನಿದ್ದೆಯೇ ಬರಲಿಲ್ಲ. ಅನೇಕ ವಿಚಾರಗಳ ತಾಕಲಾಟ ದಿಂದ ಮನಸ್ಸು ಬಹಳ ಘಾಸಿಯಾಯಿತು. ಕೋಳಿಕೂಗುತ್ತಲೇ ಎದ್ದು ಬಿಟ್ಟಳು. ಇದಾಗಿ ಹದಿನೈದು ಇಪ್ಪತ್ತು ದಿನಗಳು ದಾಟಿರಬಹುದು. ಸಾವಿ ತ್ರಿಯು ಹಟಕ್ಕಾಗಿ ಪುನಃ ಅಣ್ಣನನ್ನು ಸಿನೇಮಾಕ್ಕೆ ಕರೆದಳು. "ಯಾವದದ?" "Sherle Temple in curly Top" "ನಾ ಬಲ್ಲೆ" "ಒಲ್ಲಿಯಾಕ?" "ಯಾಕೇನು. ನಾಬರೂದೂಲ್ಲ!" "ಕಾರಣೇನು ಅಂತೀನಿ ? " English cinema ಇನ್ಮ್ಯಾಲೆ ನೋಡಬಾರದೂ ಅಂತ ಠರಾಯಿಸೇನಿ."

ಸಾವಿತ್ರಿಯು ಪರಮಾಶ್ಚರ್ಯದಿಂದ ಅಣ್ಣನ ಮುಖವನ್ನು ನೋಡಿ ದಳು ಕಣ್ಣುಗಳನ್ನರಳಿಸಿ ನೋಡಿದಳು. ಹುಬ್ಬುಗಳನ್ನೇರಿಸಿ ನೋಡಿದಳು. ಏನೋ ಅನ್ನಬೇಕೆಂದು ಬಾಯ್ದೆರೆದವಳು ಹಾಗೇ ಅದನ್ನು ಮುಚ್ಚಿದಳು. ತಾನು ಹದಿನೈದು ದಿನಗಳ ಹಿಂದಿನ ರಾತ್ರಿ ಅಣ್ಣಾ ಅತ್ತಿಗೆಯರ ವಾಗ್ವಾದ ಕೇಳಿದ್ದು ಸಾವಿತ್ರಿಗೆ ನೆನಪಾಯಿತು. ಬಹಳ ಮೆತ್ತಗಾದಳು. ಮುಖವು ಬಾಡಿತು ತಲೆತೆಳಗಾಯಿತು. ನಾಚಿದಳು ಸೆರಗನ್ನು ಸರಿಮಾಡಿಕೊಂಡಳು. "ಹೂಂ. ಹಿಂಗೇನ! ಹಂಗಾರ ನಾನೂ ಹೋಗುದುಲ್ಲಾ" ಎಂದುದು ಸಾವಿತ್ರಿಯು ಮೆಲ್ಲಗೆ ತನ್ನ ಕೋಣೆಗೆ ಸಾಗಿದಳು.

ಅತ್ತಿಗೆಗೆ ಬೇಡಾದದ್ದು ಅಣ್ಣನಿಗೂ ಬೇಡ. ಅಂದಿನಿಂದ ಅವಳು ಮನೋವೃತ್ತಿಯೇ ಬೇರೆಯಾಯಿತು. ದೃಷ್ಟಿಯೂ ಬದಲಾಯಿತು. ಎಲ್ಲರ ಚಲನವಲನವನ್ನು ಬಹು ಸೂಕ್ಷ್ಮ ದೃಷ್ಟಿಯಿಂದ ನೋಡುವಳು. ಎಲ್ಲರ ಭಾವನೆಗಳನ್ನು ವಿಮರ್ಶಾತ್ಮಕವಾಗಿ ತಿಳಿದುಕೊಳ್ಳತೊಡಗಿದಳು. ಮನೆ ಯಲ್ಲಿ ತಾಯಿಯೇ ಯಜಮಾನಿ ಅವಳ ಅಭಿಪ್ರಾಯವೇ ತಂದೆಯ ಅಭಿ ಪ್ರಾಯ. ಅವಳು ಸೂಚಿಸಿದಂತೆಯೇ ಎಲ್ಲವೂ ಜರಗಬೇಕು. ತಾಯಿಯು ತಂದೆಯನ್ನು ಕೇಳುವಳು. ಇವತ್ತ ಅಡಿಗಿ ಏನಮಾಡಬೇಕು? ಎಂದು ತಂದೆ ಯು ಹೇಳಿದ್ದೊಂದು ತಾಯಿಯು ಮಾಡಿದ್ದೊಂದು ಅದನ್ನು ಉಣ್ಣು ವಾಗ ತಂದೆಯೇ ಮೊದಲು ಅನ್ನುವರು. 'ಈ ಪಲ್ಯಾನ್ನ ಮಾಡಿದ್ದೇ ನೆಟ ಗಾತು' ಎಂದು ಅಂತತ ಮಾಡಿದೆ" ಎಂದು ತಾಯಿಯು ಹೆಮ್ಮೆ ಪಡುವಳು.

ಅರಿವೆ-ಅಂಚಡಿ ಕೊಳ್ಳುವಾಗ ಪ್ರವಾಸಕ್ಕೆ ಹೋಗುವಾಗ...ಅದೇಕೆ ತಂದೆಯ
ಎಲ್ಲ ಕಾರ್ಯಕ್ರಮಗಳಿಗೂ ತಾಯಿಯೇ ಮಾರ್ಗದರ್ಶಕಳು. ತಾಯಿ
ತಂದೆಗಳು ಕಾರಣವಿಲ್ಲದೇ ಜಗಳಾಡುತ್ತಿದ್ದುದು ಸಾವಿತ್ರಿಗೆ ನೆನಪಾಯಿತು.
ಹರಟೆಯ ರೂಪದಲ್ಲಿಯ ಮಾತುಗಳು ಜಗಳದಲ್ಲಿ ಪರಿಣಮಿಸುವಾಗ
ತಾಯಿಯೇ ಪೂರ್ಣ ತಪ್ಪುಗಾರ್ತಿ ಇದ್ದರೂ ಅವಳೇ ಮೊದಲು ಸಿಟ್ಟಿಗೇಳು
ವಳು. ಒದರಾಡುವಳು. ಕೆಲಹೊತ್ತು ತಾಯಿ ತಂದೆಯರು ಮಾತು ಬಿಡು
ವರು. ಕಡೆಗೆ ತಂದೆಯೇ ಮೊದಲು ತಾಯಿಯನ್ನು ಮಾತಾಡಿಸುವನು.
ತಾಯಿಯು ಶಾಂತಳಾಗಬೇಕಾದರೆ ತಂದೆಯು ನಡೆದುಕೊಳ್ಳುವ ರೀತಿಯನ್ನು
ಸಾವಿತ್ರಿಯು ನೆನಿಸಿ ನಕ್ಕಳು.

ಅಣ್ಣನ ಪರಿಸ್ಥಿತಿ ಏನು! ಅವನೂ ಇವನೇ. ಮನೆತನದ ಯಾವುದಾ
ದರೊಂದು ವಿಷಯಕ್ಕೆ ತಾಯಿಯಾಗಲೀ, ತಂದೆಯಾಗಲಿ ಅಣ್ಣನ ಅಭಿ
ಪ್ರಾಯ ಕೇಳುವರು. ಅವನು ತನ್ನ ನಿರ್ಣಯವನ್ನು ತಂದೆ ತಾಯಿಗಳಿಗೆ
ಸೂಚಿಸುವಾಗ ಅತ್ತಿಗೆಯ ಮೋರೆಯನ್ನು ನೋಡುತ್ತಲೇ ಮಾತಾಡುವನು
ಅವನು ಹೇಳಿದಂತೆಲ್ಲ ಅವಳ ಮುಖವು ಉಲ್ಲಸಿತವಾಗಹತ್ತಿದರೆ ಮುಂದರಿ
ಸುವನು. ಮುಖವು ತುಸು ಬಾಡಿದರೆ ಅಥವಾ ಅಣ್ಣನ ಮೇಲೆ ಸಿಟ್ಟಿಗೆದ್ದು
ಗಂಟಿಕ್ಕಿದರೆ ಕೂಡಲೇ ಅಣ್ಣನು ತನ್ನ ಮಾತನ್ನು ವಿರುದ್ಧ ದಿಕ್ಕಿಗೆ ತಿರುಗಿ
ಸಿಬಿಡುವನು. ಇದನ್ನು ಸಾವಿತ್ರಿಯು ಎಷ್ಟೋ ಸಲ ನೋಡಿದ್ದಾಳೆ.
ತಂದೆ ಮತ್ತು ಅಣ್ಣಂದಿರಲ್ಲಿ ಬಹಳ ವ್ಯತ್ಯಾಸವಿದೆ. ತಂದೆಯು ಒಮ್ಮೊಮ್ಮೆ
ತನ್ನ ವೈಯಕ್ತಿಕ ಸ್ಥಾನವನ್ನು ಸ್ಥಿರಗೊಳಿಸಲು ತಾನು ಹೇಳಿದಂತೆ ಕೇಳಲು
ಎಲ್ಲರಿಗೂ ಒತ್ತಾಯ ಪಡಿಸುವರು. ಅಣ್ಣನಲ್ಲಿ ಆ ಗುಣವೇ ಕಂಡುಬರಲಿಲ್ಲ.
ಇಲ್ಲಿಯವರೆಗಂತೂ ಕಾಣಬಂದಿಲ್ಲ. ಅತ್ತಿಗೆಯ ರುಚಿಯೇ ಇವನ
ರುಚಿ, ಅತ್ತಿಗೆಯ ವ್ಯವಹಾರಕ್ಕೆಲ್ಲವೂ ಇವನ ಒಪ್ಪಿಗೆ. ಅವಳು ಮಾಡಿದ್ದೇ.
ಯೋಗ್ಯ. ಆಡಿದ್ದೇ ವಾಕ್ಯ. ಅವಳು ನಕ್ಕರೆ ತಾನೂ ನಗುವನು. ಅವಳು
ಇವನ ಸರ್ವಸ್ವವು. ಇವನ ಜೀವ. ಇವನ ಜೀವನದ ಆಧಾರ. ಸಾವಿತ್ರಿಗೆ
ಒಮ್ಮೆಲೇ ಒಂದು ವಿಷಯ ನೆನಪಾಗಿ ನಕ್ಕಳು.

ಮೊದಲು ಮನೆಯಲ್ಲಿ ತಾವೆಲ್ಲರೂ ಕಾಫಿ ಕುಡಿಯುತ್ತಿದ್ದರು. ಮನೆ
ಯಲ್ಲಿ ಚಹದ ಸಂಪರ್ಕವಿರಲಿಲ್ಲ. ಅಣ್ಣನ ಲಗ್ನವಾಯಿತು. ಅತ್ತಿಗೆಗೆ ಕಾಫಿ

ಸೇರುತ್ತಿರಲಿಲ್ಲವೆಂದು ಅಣ್ಣನಿಗೆ ಕೂಡಲೇ ಗೊತ್ತಾಯಿತು ಅಣ್ಣನು ಒಂದು ವ್ಯಾಖ್ಯಾನ ಮಾಲೆಯನ್ನೇ ಪ್ರಾರಂಭಿಸಿದನು. "ಕಾಫಿಇಂದ ಕಾವು ಆಗುವದು. ಶೌಚವು ಚನ್ನಾಗಿ ಆಗುದುಲ್ಲ. ಕಾಫೀ ಚಟವು ಹೊಟ್ಟೆಗೆ ಅಪಾಯಕರ. ಆದ್ದರಿಂದ ಚಹ ಕುಡಿಯಬೇಕು. 'ಚಹನೂ ಕೆಟ್ಟದಿದೆ, ಅದರ ಕಾಫಿ ಅಷ್ಟು ಕೆಟ್ಟಿಲ್ಲ. ನನಗಂತೂ ನಾಳಿನಿಂದ ಕಾಫಿ ಬೇಡ, ಚಹ ಕುಡಿತೇನಿ....."ಎಂದು ಏನೇನೋ ಹೇಳಿ ತನಗಾಗಿ, ಆದುದರಿಂದ ಅತ್ತಿಗೆಗಾಗಿ ಎರಡು ಕಪ್ಪ ಚಹ ಮೂರು ಕಪ್ಪು ಕಾಫಿ ಹೀಗೆ ತಯಾರಾಗಹತ್ತಿದವು. ಕೆಲದಿನಗಳ ತರುವಾಯ ತಂದೆಯವರೂ ಮೆಲ್ಲಗೆ ಚಹ ಸುರುಮಾಡಿದರು. ಆ ಮೇಲೆ ತಾಯಿ, ಆಮೇಲೆ ತಾನು, ಸಾವಿತ್ರಿ. ಕೇವಲ ಒಬ್ಬ ೧೫ ವರುಷದ ಹುಡುಗೆಯು ೨೫ ವರುಷದಿಂದ ತಮ್ಮ ಮನೆಯಲ್ಲಿ ನಡೆದುಬಂದ ಕಾಫಿ ಕುಡಿಯುವ ಪದ್ಧತಿಯನ್ನು ಕಿತ್ತೊಗೆದು ಚಹ ಪ್ರಾರಂಭಿಸಿ ಬಿಟ್ಟಳೆಂಬುದನ್ನು ಕಂಡು ಸಾವಿತ್ರಿಯು ನಕ್ಕುಬಿಟ್ಟಳು. ಹೆಂಗಸಿನ ಅಸಾಮಾನ್ಯವಾದ ಸಾಮರ್ಥ್ಯಕ್ಕೆ ಮನಃಪೂರ್ವಕವಾಗಿ ನಕ್ಕಳು. ಈಗ ಮನೆಯಲ್ಲಿ 'ಕಾಫಿ' ಅಂದರೆ ಯಾರಿಗೂ ಆಗದು. ಇಷ್ಟು ಪರಿವರ್ತನೆ ಮಾಡಿಬಿಟ್ಟಿದ್ದಾಳೆ ತನ್ನ ವೀರ ಅತ್ತಿಗೆ. ಸುಳ್ಳು, ಎಲ್ಲವೂ ಸುಳ್ಳು. ಸಾವಿತ್ರಿಯು ಶಾಲೆಯಲ್ಲಿ ಕೇಳಿದ, ಓದಿದ, ಸ್ತ್ರೀ ಸ್ಥಿತಿಯ ವರ್ಣನೆಗಳೆಲ್ಲವೂ ಸುಳ್ಳು. ಸ್ತ್ರೀಯು ಜೀವನದಲ್ಲಿ ಸರ್ವಾಧಿಕಾರಿಣಿ ಅವಳ ಹೇಳಿಕೆಯಂತೆ ಎಲ್ಲವೂ ನೆಡೆಯುವದು. ಎಲ್ಲರೂ ನಡೆಯುವರು.

ಸಾವಿತ್ರಿಯ ಮನವು ಏನೇನೋ ಅಂದುಕೊಂಡಿತು. ತಾನು ಬೇಗನೆ ಲಗ್ನವಾಗುವಳು. ತನಗೂ ಒಂದು ಮನೆಯಾಗುವದು. ಇದು ತನ್ನ ಮನೆಯಲ್ಲ, ತಂದೆ ಇರುವವರೆಗಿನ ಮಾತು ಬೇರೆ ಇತ್ತು. ಎಲ್ಲರೂ ಅವನಿಗಿಂತ ಚಿಕ್ಕವರು. ಎಲ್ಲರೂ ಅವನಿಂದ ಪೋಷಿತರು. ಅವನು ಯಜಮಾನ. ಎಲ್ಲರೂ ಅವನ ನೆರಳು. ಆದರೆ ಅವನು ತೀರಿದ ಮೇಲೆ ಮನೆಗೆ ಅಣ್ಣ ಅತ್ತಿಗೆಯರು ಯಜಮಾನರಾದರು. ತಾನು ಒಬ್ಬ ಅಥಿತಿ ಅಣ್ಣಾ ಅತ್ತಿಗೆ ತನ್ನನ್ನು ಬಹಳ ಪ್ರೀತಿಯಿಂದ ನೋಡುವರು. ನಿಜ. ಆದರೆ ಸಾವಿತ್ರಿಗೆ ತಾನು ಈ ಮನೆತನಕ್ಕೆ ಹೊಂದಿದವಳಲ್ಲವೆಂಬ ಭಾವನೆಯೇ ಉಂಟಾಗಿದೆ.

ಅಂದು ತಂದೆಯು ಪೂರ್ಣ ಜೀರ್ಣನಾಗಿದ್ದನು. ಸಂಜೆ ಕಳೆಯುವನೋ ಇಲ್ಲವೋ ಸಂಶಯವಿತ್ತು. ಅವರ ಸುತ್ತಲೂ ತಾನೂ ಅಣ್ಣನೂ ತಾಯಿಯು

ಕುಳಿತಿದ್ದರು. ತಾಯಿಯು ಕಣ್ಣೀರನ್ನು ಹತ್ತಿಕ್ಕುವ ಹೋರಾಟದಲ್ಲಿದ್ದಳು. ಆಗ ತಂದೆಯು ಅಣ್ಣಾನನ್ನು ಕ್ಷೀಣಸ್ವರದಲ್ಲಿ ಕರೆದು ನುಡಿದನು. "ನನ್ನ ಎಲ್ಲಾ ಆಶಾ ತೃಪ್ತಿಆದವು. ಆದ್ರ ಸಾವಿತ್ರಿಯ ಲಗ್ನ ಮಾಡಿ ಆಕಿನ್ನ ಅಕೀ ಮನೀಗೆ ಕಳಿಸಲಿಲ್ಲ. ಇದ ಒಂದು ಚಿಂತಿ ಅದ" ... ಆ ಭಾರವನ್ನು ತನಗೆ ಬಿಡೆಂದು ಅಣ್ಣಾನು ಹೇಳಿ ಆ ಪ್ರಕಾರ ವಚನವನ್ನಿತ್ತನು. ತಂದೆಯ ಜೀವವು ಹಾರಿತು. ಸಾವಿತ್ರಿಗೆ ಬಹಳ ದುಃಖವಾಯಿತು. ತನ್ನ ಸೆರಗನ್ನು ಮೊರಗೆ ಹಾಕಿಕೊಂಡು ಅತ್ತಳು. ಬಹಳ ಅತ್ತಳು ತನ್ನಿಂದ ತಂದೆಗೆ ದುಃಖವಾಯಿತು. ಆ ದುಃಖದಲ್ಲಿಯೇ ಅವನು ತೀರಿದನು. ಇನ್ನು ಅಣ್ಣಾನಿಗೆ ತಾನು ದುಃಖಕೊಡಬೇಕೆ? ಅಣ್ಣಾನು ತನ್ನ ವಚನ ಪಾಲಿಸುವದಕ್ಕಾಗಿ ಎಷ್ಟು ಹೆಣಗಾಡುತ್ತಿದ್ದಾನೆ. ಊರೂರು ಅಲೆಯುತ್ತಿದ್ದಾನೆ ಸಣ್ಣಾಗಿದ್ದಾನೆ. ಸೊರಗಿದ್ದಾನೆ. ಸಾವಿತ್ರಿಯು ಸಾವರಿಸಿಕೊಂಡಳು. ಮುಖವರೆಸಿಕೊಂಡಳು ಎದುರಿಗೆ ನೋಡಿದಳು. ಗೋಡೆಗೆ ತಂದೆ ಫೋಟೋ ಇದೆ. ಮತ್ತೆ ದುಃಖಬಂದಿತು. ಇವ್ಮಡಿಸಿತು. ಕಣ್ಣೀರು ಗಲ್ಲಗಳಗುಂಟ ಇಳಿಯ ತೊಡಗಿದವು. ತಂದೆಗೆ ಕೈಜೋಡಿಸಿದಳು. ಅಪ್ಪಾ ನಾ ಲಗ್ನ ಮಾಡಿಕೋತೀನಿ ನನ್ನ ಮನೀಗೆ ನಾ ಹೋಗತೇನಿ. ಅಣ್ಣಾಗ ಏನೂ ತ್ರಾಸು ಕೊಡುದುಲ್ಲ. ಅವಾ ಆರಿಸಿದವರನ್ನ ಲಗ್ನ ಆಗತೇನಿ. ನನ್ನ ಸ್ವಾರ್ಥ ಏನೂ ನೋಡುದುಲ್ಲ ..." ಅವರೆ ಅವಳ "ಅಪ್ಪ" ಈ ಶಬ್ದಗಳನ್ನು ಕೇಳಿ ಆನಂದಪಟ್ಟು ನಲಿಯಲು ಅಲ್ಲಿರಲಿಲ್ಲ.

ಸಾವಿತ್ರಿಗೆ ಸಾವರಿಸಿಕೊಳ್ಳಬೇಕಾದರೆ ಬಹಳ ಹೊತ್ತು ಹಿಡಿಯಿತು. ಕುರ್ಚಿಯಲ್ಲಿ ಕುಳಿತಳು. ಮನದಲ್ಲಿ ಏನೇನೋ ನೆನೆದಳು. ತಾನು ಬಹು ದುರ್ದೈವಿಯೆಂದಳು. ಪಾಪಿಯೆಂದು ಹಳಿದಳು. ನಿಟ್ಟುಸಿರುಬಿಟ್ಟಳು. ಹನೆಯಲ್ಲಿ ಶೂನ್ಯಳಾಗಿ ಏನೇನೋ ನೋಡಿದಳು. ನೊಂದಳು.

ಸಾವಿತ್ರಿಯು ಎದ್ದು ಮೆಲ್ಲನೆ ಕಿಡಿಕೆಯತ್ತ ಬಂದಳು. ಮನವು ಏನೋ ಹುಡುಕುತ್ತಿತ್ತು ಕೈ ಬೆರಳುಗಳು ಕಿಡಿಕೆಯ ಪರದೆಯನ್ನು ಪೂರ್ಣ ಸರಿಸಿದವು. ಸೂರ್ಯನು ಕಾಣಿಸದಿದ್ದರೂ ಅವನ ರೇಶಿಮೆಯ ಕಿರಣಗಳು ಅಲ್ಹಾದವನ್ನೀಯುವವು. ಆಕಾಶವೆಲ್ಲ ಕೆಂಪು ಕಮಲದ ಪಕಳೆಯಿಂದ ಮುಚ್ಚಿದಂತೆ ತೋರುವದು. ಗುಬ್ಬಿಗಳು ಚೀಪಿಲಿ" ಶಬ್ದದೊಂದಿಗೆ ತಮ್ಮ

ಮನೆಯ ಕಡೆಗೆ ಧಾವಿಸುತ್ತಿರುವವು. ಮಾರುತನು ಮೆಲ್ಲಗೆ ತಂಗಾಳಿಯನ್ನು ಬೀಸಿದನು ತಪ್ತ ಮನಸ್ಸಿಗೆ ಸುಖವನ್ನೀಯಲು ಪ್ರಯತ್ನಿಸಿದನು. ಅಚೆಯಿಂದ ಪೋನೋಗ್ರಾಫಧ್ವನಿಯೊಂದು ಕೇಳುವದು. ಈಚೆಗೆ ಪಿಯಾನೋದಲ್ಲಿ ಹಾಡುವ ಸುಮಧುರ, ಮಂಜುಳ, ಕೋಕಿಲೆಯ ಧ್ವನಿಯ ತರುಣಿಯ ಗಾನವೊಂದು ಬರುತ್ತಿರುವದು. ಬೀದಿಯಲ್ಲಿಯೂ ಗದ್ದಲ. ಜನರ ಓಡಾಟವೆಲ್ಲ, ತುಂಬಿಕೊಂಡಿದೆ

ಎಷ್ಟೋ ದಂಪತಿಗಳೇ ಬಹಳಿದ್ದಾರೆ ಈ ದಿನ' ಎಂದುಕೊಂಡಳು. ಸಾವಿತ್ರಿ. ಸಹಜವಾಗಿ ಒಂದು ದಂಪತಿಯ ಕಡೆಗೆ ಅವಳ ದೃಷ್ಟಿ ಹೋಯಿತು. ಹೆಂಡತಿ ಏನೋ ಹೇಳುತ್ತ ನಡೆದಿದ್ದಾಳೆ. ಗಂಡನು ಅವಳ ಮಾತಿಗೆ ನಕ್ಕನು. ಅವನು ನಕ್ಕದ್ದಕ್ಕೆ ಉತ್ತರವೆಂದು ಇವಳೂ ನಗುವಳು. ಮತ್ತೊಂದು ಮಾತಾಡಿದಳು. ಅದಕ್ಕೆ ಅವನು ಗಂಭೀರನಾಗಿಯೇ ನಡೆಯುತ್ತಿದ್ದಾನೆ ಹೆಂಡತಿಯು ತನ್ನ ಮಾತಿಗೆ ತಾನೇ ನಕ್ಕಳು. ಅವಳ ನಗೆಗೆ ಗಂಡನೂ ನಕ್ಕನು. ತೋಳಿಗೆ ತೋಳು ಜೋಡಿಸಿ ನಡೆದಿದ್ದಾರೆ. ಮಾತಿಗೆ ಮಾತು ನಗೆಗೆ ನಗೆ, ಈ ದಂಪತಿಗಳು ಈ ಜಗತ್ತನ್ನೇ ಮರೆತು ಹೊರಟಿದ್ದಾರೋ ಏನು! ಎಡಬಲದವರ ಪರಿವೆಯೇ ಇಲ್ಲ-ಇವರಿಗೆ. ಇವರಿಗಷ್ಟೇ ಏಕೆ, ಎಲ್ಲರಿಗೂ ಪರಿವೆ ಇದ್ದಂತೆ ತೋರುವದಿಲ್ಲ ತಮ್ಮಷ್ಟಕ್ಕೆ ತಾವು ನಡೆದಿದ್ದಾರೆ. ಒಂದು ಕೃಷ್ಣವರ್ಣ ದಂಪತ್ಯ ಹೊರಟಿದೆ. ಗಂಡನ ಹೆಗಲಮೇಲೆ ತನ್ನ ಕೈಯಿಟ್ಟಿದ್ದಾಳೆ ಅವಳ ಟೊಂಕದ ಸುತ್ತಲೂ ಪತಿಯ ತೋಳಿದೆ ಏನು ನಗೆ! ಏನು ಮಾತು! ತನ್ಮಯರಾಗಿ ಹೊರಟಿದ್ದಾರೆ. ತೆಳ್ಳಗೆ ಬಳಕುವವಳು ಗಟ್ಟಿಮುಟ್ಟಾಗಿರುವ ಪುಷ್ಟಪತಿಯನ್ನಾಶ್ರಯಿಸಿಸಾಗಿದ್ದಾಳೆ. ಹೂವಿನಂತೆ ಅವಳ ನಡೆ, ನುಡಿ ಗಂಭೀರವಾಗಿದೆ ಪತಿಯ, ನಗೆ ನೋಟ. ಏನಿದು ಚಮತ್ಕಾರ, ಸೊಗಸು ಸೌಭಾಗ್ಯ! ಬೂದುಬಡಕ ಗಂಡಿನಲ್ಲಿ ಬಳ್ಳಿಯಂಥ ಮಳ್ಳಿ ಹೆಣ್ಣಿನವರಸವನ್ನುಂಡಿಸಿತು.

ನಿಜ ತೀರ ನಿಜ. ಉಣ್ಣದೇ ಏನು ಮಾಡೀತು.! ಸಾವಿತ್ರಿಯು ಕಿಡಿಕೆಯ ಪರದೆಯನ್ನು ಪೂರ್ಣ ಸರಿಸಿಬಿಟ್ಟಳು. ಕಸೂತಿಗಾಗಿ ಸೂಜಿನೂ ದಾರಗಳನ್ನು ತೆಗೆದುಕೊಂಡು ಕುರ್ಚಿಯಲ್ಲಿ ಕುಳಿತಳು.

ಹೆಣ್ಣು ಜೀವಕ್ಕೆ ಸೂಜೀಸು ದಾರವೇಂದರೆ ಪಂಚಪ್ರಾಣ. ಅವೇ ಅವಳಿಗೆ ಜೊತೆಗಾರ್ತಿ, ಅವೇ ಅವಳ ಮನಸ್ಸನ್ನು ಹಗುರು ಮಾಡುವ ವಸ್ತುಗಳು ಅವೇ ಅವಳ ಮನಸ್ಸನ್ನು ಏಕಾತ್ರಿಗೆ ತರುವ ಉಪಾಯಗಳು. ಸಾವಿತ್ರಿಯು ಹಿಂದೆ ಎಂದೂ ಇಷ್ಟು ಕಸೂತಿಯನ್ನು ಹೆಣದಿರಲಿಲ್ಲ ಈ ದಿನ ಅದರಲ್ಲಿ ಅಷ್ಟು ತಲ್ಲೀನಳಾಗಿದ್ದಾಳೆ.

ತಲ್ಲೀನತೆಯಲ್ಲಿ ಮನವು ತೇಲತೊಡಗಿವೆ ಅದರ ಬೆನ್ನಟ್ಟಿ ನಡೆದಿವೆ, ಕಲ್ಪನಾ ವಿಲಾಸ ಅಣ್ಣಾ ತಾಯಿ ಮೊನ್ನೆಯೇ ಊರಿಗೆ ಹೋಗಿದ್ದಾರೆ. ಅಲ್ಲಿಯ ಒಂದು ಮನೆತನದಲ್ಲಿಯ ಹುಡುಗನಿಗೆ ಸಾವಿತ್ರಿಯನ್ನು ಕೊಡುವೆವೆಂದು ಕೇಳಲು ಹೋಗಿದ್ದಾರೆ. ನಿನ್ನೆಯೇ ಬರಬೇಕಿತ್ತು. ಏಕೆ ಬರಲಿಲ್ಲೋ? ಬಹುಶಃ ಅವರು "ಆಗಬಹುದು." ಅಂದಿರಬೇಕು. ಅಂತೆಯೇ ತಾಯಿ ಅಣ್ಣಂದಿರು, ಮುಂದಿನ ಮಾತು ಕಥೆಗಳಿಗಾಗಿ ನಿಂತಿರಬಹುದು; ಬಹುದು. ಇಲ್ಲದಿದ್ದರೆ ಅಣ್ಣಾ ಹಾಗೆ ಎಂದೂ ನಿಲ್ಲುವವನಲ್ಲ. ಇರಬಹುದು.

ವರನೆಂಬುವವನು ಹೇಗಿದ್ದಾನೆ! ಹೇಗಿದ್ದರೇನು! ಗಂಡಸಿಗೆ ಲಾವಣ್ಯ ಮುಖ್ಯವಲ್ಲ. ಧೃಢಕಾಯ ಗಾಂಭೀರ್ಯ. ಹೆಂಡತಿ ಮಕ್ಕಳಿಗೆ ದುಡಿದು ಹಾಕುವ ಯೋಗ್ಯತೆ ಇವು ಇರಲೇಬೇಕು ಇವೆಲ್ಲವುಗಳೂ ಇವೆಯೆಂದು ಅಣ್ಣನು ತಾಯಿಯ ಮುಂದೆ ವಿವರಿಸುತ್ತಿರುವಾಗ ಪಕ್ಕದ ಕೋಣೆಯಲ್ಲಿ ಕುಳಿತು ಸಾವಿತ್ರಿಯು ಎಲ್ಲವನ್ನು ಕೇಳುತ್ತಿದ್ದಳು "ನೀತಿ ನಡಾವಳಿಗಳನ್ನು ಅವನಿಂದ ಕಲಿಯಬೇಕು" ಎಂದು ಅಣ್ಣನು ತಾಯಿಗೆ ಈ ವರನ ನೀತಿಯ ವಿಷಯಕ್ಕೆ ಆಶ್ವಾಸನಕೊಟ್ಟಿದ್ದಂತೂ ಸಾವಿತ್ರಿಯು ಸ್ಪಷ್ಟ ಕೇಳಿದ್ದಾಳೆ. ಸಾಕು ಗಂಡಸಿನಿಂದ ಹೆಂಗಸು ಇದಕ್ಕೂ ಹೆಚ್ಚೇನು ಅಪೇಕ್ಷೆ ಮಾಡಬೇಕು! ಸಾವಿತ್ರಿಯು ಅವನನ್ನು ಲಗ್ನವಾಗುವಳು ವಿವಾಹವಾದ ತುಸು ದಿವಸಗಳಲ್ಲಿಯೇ ಗಂಡನ ಮನೆಗೆ ಹೋಗುವಳು

ಮನೆಯಲ್ಲಿ ಅತ್ತೆ ಮಾವಂದಿರಿಗೆ ವಿಧೇಯಳಾಗಿರಬೇಕು. ಗಂಡನ ಅಭಿರುಚಿಯನ್ನರಿತು ವರ್ತಿಸಬೇಕು. ಸಾವಿತ್ರಿಯು ನಕ್ಕಳು ಗಂಡನಿಗೆ ಸಂತೋಷವಾಗುವಂತೆ ವರ್ತಿಸಿದರೆ ಅವನು ತನ್ನನ್ನೂ ಬಹಳ ಪ್ರೀತಿಯಿಂದ ನೋಡುವನು. ಕೃತಜ್ಞತೆಯಿಂದ, ತೃಪ್ತಿಯಿಂದ ನಗುವನು. ಆದಕ್ಕೆ

ಪ್ರತಿಯಾಗಿ ಸಾವಿತ್ರಿಯೂ ನಗುವಳು. ನಗೆಗಳ ತೆರೆಗಳು ಕೊಳಲಿನ ನಾದ ದಂತೆ ಪರಸ್ಪರರ ಕಿವಿಗೆ ಬೀಳುವವು. ಆ ತೆರೆಗಳಲ್ಲಿ ಪರಸ್ಪರರ ಹೃದಯಗಳು ತೇಲುವವು, ಜೀವನ ಸಾಗರದಲ್ಲಿ ಸಾಗುವವು, ಒಂದಾಗುವವು.

ಸಾವಿತ್ರಿಗೂ ಮಕ್ಕಳಾಗುವವು. ಗಂಡನ ಆದಾಯವನ್ನು ಕೇಳಿ ಕೊಂಡು ಅಷ್ಟರಲ್ಲಿಯೇ ಎಲ್ಲರನ್ನೂ ತೃಪ್ತರನ್ನಾಗಿ ಇಡುವಳು. ಸಾವಿತ್ರಿಯು ಕಲಿತ ಹೆಣ್ಣು, ಮಕ್ಕಳಿಗೆ ಯೋಗ್ಯ ಶಿಕ್ಷಣ ಕೊಡುವಳು. ತೊಟ್ಟಿಲದ ಬಾಲ ಕನಿಂದ ದೊಡ್ಡವನಾಗಿ ಸಾರಾಸಾರ ವಿಚಾರಿಯಾಗುವರೆಗಿನ ಎಲ್ಲ ಮಕ್ಕ ಳಿಗೂ ತಾನೇ ಶಿಕ್ಷಣ ಕೊಡಬೇಕು. ಇಲ್ಲವಿದ್ದರೆ ತಾನು ಇಷ್ಟು ವಿದ್ಯೆ ಕಲಿತಿದ್ದರ ಫಲವೇನು ? ಬಾಲಕರನ್ನು ಆದರ್ಶ ಮಕ್ಕಳನ್ನಾಗಿ ಮಾಡಬೇಕು.

ಸಾವಿತ್ರಿಯು ಮನೆಗೆಲಸವನ್ನೆಲ್ಲ ತಾನೇ ಮಾಡಬೇಕೆಂದು ನಿಶ್ಚಯಿ ಸಿದಳು. ತಾನು 'Educated Girl' ಆದರೇನಾಯಿತು ತನ್ನ ಮನೆ ಯಲ್ಲಿ ತಾನು ಕೆಲಸ ಮಾಡಿದರೆ ಅಪಮಾನವೇ, ಛೆ ಛೆ, ಎಷ್ಟೂ ಅಪಮಾನ ವಲ್ಲ. "ಕಲಿತ ಹೆಣ್ಣುಮಗಳು ಕೆಲಸ ಮಾಡುವದಿಲ್ಲ, ಅವಳ ಬದಲು ಗಂಡಸರೇ ಅಡಿಗೆ ಮಾಡಬೇಕೇ" ಎಂದು ಮೂಗು ಎಳೆಯುವವರೆಗೆ ಸಾವಿ ತ್ರಿಯು ಒಳ್ಳೇ ಪಾಠ ಕಲಿಸಲು ಸಿದ್ಧಳಾದಳು. ಕಲಿತ ಹುಡುಗೆಯ ವಿರುದ್ಧ ಹೂಡಿದ ಗಂಡಸರ ದೂರುಗಳು ಅಯೋಗ್ಯವೆಂದೂ ಅಸತ್ಯವೆಂದೂ ಸಾವಿ ತ್ರಿಯು ತೋರಿಸುವವಳಿದ್ದಾಳೆ.

ಮುಂಜಾನೆ ತಾನೇ ಮೊದಲು ಏಳಬೇಕು. ಮಕ್ಕಳನ್ನು ಎಬ್ಬಿಸಿ ಅವರಿಗೆ ಹಾಲು ಕುಡಿಸಿ ಪೋಷಾಕನ್ನು ತೊಡಿಸಿ ಶಾಲೆಗೆ ಕಳಿಸಬೇಕು. ಈ ಗದ್ದಲಕ್ಕೆ 'ರಾಯರು' ಏಳುವರು. ಚಹ ಸಿದ್ಧವಾಗಿಯೇ ಇರುವದು. ತನ್ನೆದುರಿಗೆ 'ರಾಯರು' ಮಣೆಯ ಮೇಲೆ ಕೂಡ್ರುವರು. "ಚಹ ಆಗೇದೇನು ?" "ಆಗದೇ ಇದ್ರ ನೀವು ಬಿಟ್ಟೀರಾ " "ನಾ ಏನು ಮಾಡೋಹಾಂದ್ದೀನಿ ನಿನಗs" "ಅಬಾಬಾ ಒಂದು ದಿವ್ಸ ತಡಾ ಆಗ್ಲೀ......" ಸಾವಿತ್ರಿಯು ಚಹ ಕಪ್ಪು 'ರಾಯರಿ'ಗೆ ಕೊಟ್ಟು ತಾನೊಂದನ್ನು ತೆಗೆದು ಕೊಳ್ಳುವಳು. "ಚಹಾ ಛಲೋ ಆಗೇದs" ಸಾವಿತ್ರಿಯು ಮುಗುಳುನಗೆ ಬೀರುವಳು ಪ್ರಾತಃಕಾಲದಲ್ಲಿ ಗುಲಾಬಿಹೂಗಳ ಪಕಳೆಗಳು ಉಚ್ಚಿದಂತೆ ಪತಿಯನ್ನು ನೋಡುವಳು ಸೂಜ

ಮಲ್ಲಿಗೆಯ ತೇಜದಂತೆ ಮನವು ಅರಳುವರು ವಿಶ್ವಮಾತೆಯು ಇದುಣಿಯನ್ನು ತೋರುವಂತೆ. “ಬರೇ ಹೊಗಳಿದರಾತೇನು! ಛಲೋ ಆದದ್ದನ್ನ ನನಗೇನು ಕೊಡತೀರಿ?” “ಕೊಡ್ಲಿಕ್ಕೆ ನನ್ನಲ್ಲೇನು ಉಳದೇದ ಸರ್ವಸ್ವ ನಿನಗ ಕೊಟ್ಟೆನಿ. ನನಗ ಬರೋ ಪಗಾರ ಸಹಿತ ೧ನೇ ತಾರೀಖಿಗೆ ನೀನೇ ವಸೂಲ ಮಾಡ್ತಿದಿ.” “ಎಲ್ಲಾ ನಿಮಗ, ನಿಮ್ಮ ಮಕ್ಕಳಿಗೇ ಖರ್ಚು ಮಾಡತೇನಿ. ನನ್ನ ದಶಿಂದು ಏನಾರ ಉಳಿಸಿಗೊತೀನೇನು?” “ನಾನೂ ನಿನಗ ನಿನ್ನ ಮಕ್ಕಳ ಸಲುವಾಗಿನೇ ಇದ್ದಿನಲ್ಲಾ......ಪತಿದೇವನು ಮನಃಪೂರ್ವಕವಾಗಿ ನಗುವನು. ಸಾವಿತ್ರಿಯೂ ನಗುವಳು. ಇಬ್ಬರೂ ನಗುವರು. ಮನೆಯೆಲ್ಲಾ ನಗುವಿನಿಂದ ತುಂಬಿ ಬಿಡುವದು.

ಪತಿಯು ಕಚೇರಿಗೆ ಹೋಗುವಾಗ ಬಾಗಿಲವರೆಗೆ ಹೋಗಿ ಸ್ವತಃ ಕಳಿಸಿ ಬರಬೇಕೆಂದು ಸಾವಿತ್ರಿಯು ನಿಶ್ಚಯಿಸಿದಳು ಮುದಿ ಹೆಂಗಸರ ಹಳೇ ಪದ್ಧತಿಗಳನ್ನು ತನ್ನ ಮನೆಯಿಂದ ತೆಗೆದೊಗೆಯಬೇಕೆಂದು ಅವಳು ನಿಶ್ಚಯಿಸಿದಳು

ಏನು ಈ ಹಳೆಯ ಜನರ ಸಂಸಾರ! ಪತಿ ಪತ್ನಿಯರ ಭೆಟ್ಟಿ ಏಕಾಂತದಲ್ಲಿಯೇ, ಪತಿಯು ಹೊರಗಿನಿಂದ ದುಡಿದು ಮನೆಗೆ ಬಂದರೆ ಪತ್ನಿಯ ಮೊಗವನ್ನು ಕಾಣುವದು ಶಕ್ಯವೇ ಇಲ್ಲ ಅಡಿಗೆಯ ಮನೆಯ ಮೂಲೆಯಲ್ಲಾಗಲೀ ಬಚ್ಚಲ ಮನೆಯಲ್ಲಿಯ ಕೆಲಸದಲ್ಲಿ ತೊಡಗಿಯಾಗಲೀ ಪತ್ನಿಯು ಇದ್ದು ಬಿಡುವಳು. ಆಗ ಅವಳ ದರ್ಶನವಾದರೂ ಮನಕ್ಕೆ ತೃಪ್ತಿಯಾದೀತೇ ಕೆಲಸದಲ್ಲಿದ್ದುದರಿಂದ ಹೊಲಸು ಸೀರೆಯನ್ನ ಉಟ್ಟಿರುವಳು. ಕೈಕಾಲು ಹೊಲಸಾಗಿರುವರು ಮುಖ ಹೊಲಸು, ದಣಿವ ಕಣ್ಣುಗಳು. ತಲೆಗೂದಲುಗಳು ಹಾರಾಡುತ್ತಿರುವವು. ಹೆಂಡತಿಯನ್ನು ಮಾತಾಡಿಸುವದು? ಸಾವಿತ್ರಿಯು ತಿರಸ್ಕಾರದಿಂದ ನಕ್ಕಳು. ಈ ಸ್ಥಿತಿಯಲ್ಲಿದ್ದವಳನ್ನು ಅವನು ಮಾತಾಡಿಸುವದಾದರೂ ಹೇಗೆ? ಇವಳಾದರೂ ಏನು ಮಾತಾಡಬೇಕು. ಅತ್ತಿ ಮಾವಂದಿರು ಏನಂದಾರು? ಹೊರಗಿನಿಂದ ಪತಿ ಬಂದಕೂಡಲೇ ಅವನ ಸಂಗಡ ಮಾತಾಡುವದಾದರೂ ಏನಿದೆ? ಎಂದೋ ಹಿಂದಕ್ಕೊಮ್ಮೆ ಅದೇ ಮೊದಲು ಸಲ ಅತ್ತಿಗೆಯು ಲಗ್ನವಾಗಿ ಬಂದಾಗ ಒಂದು ದಿನ ಹೊರಗೆ ಹೋದ ಅಣ್ಣನು ಮನೆಗೆ ಬಂದದ್ದು ಸಾವಿತ್ರಿಗೆ ನೆನಪಾಯಿತು. ಅತ್ತಿಗೆಯು ಕೂಡಲೇ ಅವನ

ಕೊಣೆಗೆ ಹೊದಳು. ಸಂಜೆಯ ಸ್ತ್ರೀ ಸಭೆಯಲ್ಲಿ ಸ್ವತಃ ಸಾವಿತ್ರಿಯ ತಾಯಿ ಯೇ ತನ್ನ ಸೊಸೆಯನ್ನು ಟೀಕಿಸಿದಳು. "ಏನವ್ವ ನಮ್ಮವ್ವ ಈಗಿನ ಹೆಣ್ಣು ಹುಡುಗೂರು ಗಂಡ ಹೊರಗಿನಿಂದ ಬಂದಕೂಡ್ಲೆ ಅವನ ಬೆನ್ನ ಹತ್ತಿ ಹೋಗ್ತಾರ ಕುಚುಕುಚು ಮಾತುಸುರುವ್ವ ಮಾತಾರ ಏನಿರ್ತಾವೋ ಏನೋ ನಾಕು ಜನರು ಕೇಳ್ಯಾರೂ ಕೇಳಲಿಕ್ಕಿಲ್ಲ ಅಂಬೋದು ಗೊತ್ತೇ ಇಲ್ಲ. ಕಿಲಿ ಕಿಲಿ, ನಗೋದು ಬ್ಯಾರೆ, ನನಗಂತೂ ಇದು ಅಸಹ್ಯ ಇಟ್ಟೆ ಹೋಗೇದ ... ..." ಎಂದಳು. ಮರುದಿನದಿಂದ ಅಣ್ಣಾ ಕರೆದರೂ ಅತ್ತಿಗೆ ಹೋಗುತ್ತಿರಲಿಲ್ಲ. ಇದರ ಸಲುವಾಗಿ ಮನೆಯಲ್ಲಿ ಇಲ್ಲದ ಗದ್ದಲವಾಯಿತು ಅಣ್ಣಾ ತಾಯಿಯಲ್ಲಿ ಜಗಳ ವಾದದ್ದು ಸಾವಿತ್ರಿಗೆ ನೆನಪಾಯಿತು. ದಿನಗಳು ಹೋದಂತೆ ಮತ್ತೆ ಅಣ್ಣಾನ ಇಚ್ಛೆಯಂತೆ ಸಂಸಾರ ಸಾಗತೊಡಗಿತು.

ಸಾವಿತ್ರಿಯು ಮಾತ್ರ ಹಾಗೇದೂ ಮಾಡುವವಳಲ್ಲ. ಅತ್ತೆಯಾಗಲೀ ಯಾರೇ ಆಗಲೀ ಬೇಕಾದವರು ಬೇಕಾದ್ದು ಅನ್ನಲಿ ಪತಿಯು ಬರುವ ವೇಳೆಗೆ ಇದ್ದದ್ದರಲ್ಲಿಯೇ ಒಳ್ಳೇ ಸೀರೆಯನ್ನುಟ್ಟುಕೊಂಡು ಬಾಚಿಕೊಂಡು ಅವನನ್ನು ಸ್ವಾಗತಿಸುವಳು ಪ್ರಸನ್ನವದನಳಾಗಿ ಅವನನ್ನು ಬರಮಾಡಿಕೊಂಡು, ಅವನ ಪೋಷಾಕನ್ನು ತೆಗೆದ ಬಳಿಕ ಅವನ ಅಸ್ತೈಕೆ ಮಾಡುವಳು ಊಟ ಉಪಚಾರಗಳಾದ ಬಳಿಕ ಅವನಿಗೆ ವೀಳ್ಯ ಕೊಡುವಳು. ನಾಲ್ಕು ಮಾತ ಗಳನ್ನಾಡುವಳು ಆ ಮೇಲೆ ತನ್ನ ಮನೆಗೆಲಸಗಳಲ್ಲಿ ತೊಡಗುವಳು.

ಹೆಂಗಸು ಪತ್ನಿ ಹೇಗೋ, ಹಾಗೇ ಮಾತೆಯು, ಅದೇಕೆ ಶಕ್ತಿ ದೇವಿಯು ಜೀವನ ಹೋರಾಟದಲ್ಲಿ ಪತಿಗೆ ಉತ್ಸಾಹ ತುಂಬುವ ಅಗಾಧ ಶಕ್ತಿಯುಳ್ಳ ವಳು ಸಾವಿತ್ರಿಯು ತನ್ನಂಥ ಅನೇಕ ಹೆಂಗಳೆಯರಿಗೆ ಇದನ್ನು ತೋರುವ ವಳಿದ್ದಾಳೆ. ಅವರನ್ನು ಹೊಸದಾರಿಗೆ ತರುವವಳಿದ್ದಾಳೆ. ಹೊಸ ವಿಚಾರ ಗಳಿಂದ ಸಮಾಜವನ್ನು ಬೆಳಗುವವಳಿದ್ದಾಳೆ. ಸಂಸಾರವು ಸುಖದಾಯಕ ವಾದ ನೌಕೆಯು. ಜೀವನ ಸಾಗರದಲ್ಲಿ ತೆರೆಗಳೆದ್ದರೇನಾಯಿತು ಯಾವಾ ಗಲೂ ಅವು ಏಳುವದಿಲ್ಲ. ಒಮ್ಮೊಮ್ಮೆ ಏಳುವವು. ನೌಕೆಯನ್ನು ನಡೆಸು ವವಳು ಜಾಣಳಿದ್ದರೆ ನೌಕೆಯು ನಿರಾಯಾಸವಾಗಿ ಪಾರಾಗುವದು. ಆದುದ ರಿಂದ ಹುಡುಗಿಯು ಶಾಲೆಗೆ ಹೋಗಬೇಕು. ಕಲಿಯಬೇಕು. ಶಿಕ್ಷಣವು ಬುದ್ಧಿಗೆ ಸಿಗುವ ವ್ಯಾಯಾಮ ಅದರಿಂದ ಬುದ್ಧಿ ಚುರುಕಾಗುವದು. ಜೀವ

ಣನ ವಿಷಯಗಳನ್ನು ವಿಮರ್ಶಕ ದೃಷ್ಟಿಯಿಂದ ಬಿಡಿಸಲು ಶಕ್ತಿ ಬರುವದು. ಶಾಲೆಯ ಶಿಕ್ಷಣದಿಂದ ಹುಡುಗಿಯರು ಅನೀತಿಯವರಾಗುವರೆಂಬುದು ತೀರ ಅಸತ್ಯವು! ಹುಡುಗಿಯರು ಅನೀತಿಯವರಾದರೆ ಹುಡುಗರಾಗಿಲ್ಲವೆಂದು ನಂಬುವದಾದರೂ ಹೇಗೆ

ಸಾವಿತ್ರಿಯು ಸಮಾಜದ ಅಜ್ಞಾನಕ್ಕೆ ನಿಟ್ಟುಸುರು ಬಿಟ್ಟಳು ತನ್ನಂಥ ಬಾಲೆಯು ಸಮಾಜದ ಅಜ್ಞಾನ ಕಿತ್ತೊಗೆಯಲು ಸಮರ್ಥಳೇ ! ಏಕೆ ಅಲ್ಲ? ಮೊದಲು ಮನೆಯಲ್ಲಿಯ ಅಂಧಾನುಕರಣಗಳನ್ನು ಕಿತ್ತೊಗೆಯಬೇಕು. ಆ ಮೇಲೆ ನರಿಹೊರೆಯ ಮನೆಯಲ್ಲಿಯದನ್ನು, ಆ ಮೇಲೆ ತನ್ನ ಓಣಿಯಲ್ಲಿಯದನ್ನು, ತಾನು ತೌರ ಮನೆಗೆಂದು ಬಂದರೆ ಈ ಊರಲ್ಲಿಯದನ್ನು......

ತಾಯಿ ಅಣ್ಣ ಅತ್ತಿಗೆಯರು ತನ್ನನ್ನು ಕಾಣಲು ತೌರಮನೆಗೆ ಕರೆಸುವರು. ಸಾವಿತ್ರಿಯೂ ಬರುವಳು ಅವಳು ಬಂದರೆ " ರಾಯರು........" ಏಕೆ, ರಾಯರಿಗೆ ತಾಯಿ ತಂದೆ, ಅಣ್ಣ, ತಮ್ಮ, ಅಕ್ಕ, ತಂಗಿ ಇರುವರು. ಅವರಕೂಡ ರಾಯರು ಕೆಲ ದಿನ ಕಾಲ ಕಳೆಯಬಹುದಲ್ಲ!

ಅತ್ತಿಗೆಯು ತೌರಮನೆಗೆಂದು ಹೋದಾಗ, ಎಂಟೇ ದಿನಗಳ ಮಟ್ಟಿಗೆ ಹೋದಾಗ, ಅಣ್ಣನ ಸ್ಥಿತಿ ಸಾವಿತ್ರಿಗೆ ನೆನಪಾಯಿತು ಅತ್ತಿಗೆ ಊರಿಗೆ ಹೋದ ಕ್ಷಣವೇ ಅಣ್ಣನ ಮೋರೆಯು ಇಳಿದು ಬಿಡುವದು. ತುಟಿಯಲ್ಲಿ ನಲಿಯುವ ನಗೆಯು ಮಾಯವಾಗುವದು. ಕಣ್ಣಲ್ಲಿಯ ಉಲ್ಹಾಸವು ನಿಸ್ತೇಜವಾಗುವದು. ಆಗ ಅಣ್ಣನು ವಿಶೇಷವಾಗಿ ಕಾರಣವಿಲ್ಲದೇ ಯಾರ ಸಂಗಡಲೂ ಮಾತಾಡುವದಿಲ್ಲ ಊಟವು ಅಷ್ಟಕ್ಕಷ್ಟೇ. ನಿದ್ದೆಗೇಡಾಗುವದೆಂದು ಚಹವನ್ನು ಎರಡೇ ಸಲ ಕುಡಿಯುವನು. ತಿರುಗಾಡಲು ಹೋಗುವದಿಲ್ಲ. ಸಿನೇಮಾ ಇಲ್ಲ. ಕ್ಲಬ್ಬು ಇಲ್ಲ ಅವನ ಗೆಳೆಯರು ನಗೆಯಾಡುವರು. " ಲಗೂನಕರಸಪಾ ಮಾರಾಯಾ. ಸಾಕು, ನಿನ್ನ ವನವಾಸ ನೋಡಲಾರೆ" ಅದಕ್ಕೆ ಅಣ್ಣ ಉತ್ತರ ಕೊಡುವದಿಲ್ಲ ಮುಂಜಾನೆ ಒಂದುಸಲ ಸಂಜೆಗೊಂದು ಸಲ ಟಪಾಲು ಸಿಪಾಯಿಯ ದಾರೀ ನೋಡುತ್ತಲೇ ಇರುವನು. ಅವನು ಟಪಾಲು ಕೊಟ್ಟ ವೇಳೆಯಲ್ಲಿ ಕೆಲವು ನಿಮಿಷಗಳ ಮಟ್ಟಿಗೆ ಮಾತ್ರ ಅಣ್ಣನು ಉಲ್ಹಾಸಿಯಾಗಿರುವನು. ಮತ್ತೆ ಔದಾಸೀನ್ಯವು ಮುಖವನ್ನು ಆವರಿಸುವದು.

ಸಾವಿತ್ರಿಗೆ ನೆನಪಿದೆ. ಅತ್ತಿಗೆಯು ಶಾಲೆಗೆ ಹೋಗಿ ಬಿಟ್ಟಿದ್ದಳು. ಅಣ್ಣನು 'ವನವಾಸ'ದಲ್ಲಿದ್ದನು. ಟಪಾಲಿನದಾರಿ ನೋಡುತ್ತಿದ್ದನು. ಎಷ್ಟು ದಿನಗಳಾದರೂ ಏಕೋ ಟಪಾಲೇ ಇಲ್ಲ. ಅಣ್ಣನು ಪೋಸ್ಟಮನನ್ನು ತಡೆಬಿ ಟಪಾಲು ಕೇಳುವನು. 'ಇಲ್ಲ'ವೆಂದರೂ "ಹುಡುಕಿ ನೋಡು" ಅನ್ನುವನು. ಪೋಸ್ಟಮನ್ನನ್ನು ಹುಡುಕಿ 'ಇಲ್ಲ' ಎಂದು ಮುಂದೆ ಸಾಗುವನು. ಕಡೆ ಗೊಂದು ದಿನ ಟಪಾಲು ಬಂದಿತು. ಅಣ್ಣನು ಪತ್ರ ಓದಿದನು. ಬಹಳ ಸಂತೋಷ ಪಟ್ಟನು. ಹಾಗೆಯೇ ಜಿಗಿದಾಡುವವನಂತೆ ಮಾರಿಗೊಂದು ಹೆಜ್ಜೆಯಂತೆ ಇಡುತ್ತ ತನ್ನ ಬೇರೆ ಕೆಲಸಕ್ಕೆ ಹೋಗಿ ಬಿಟ್ಟನು. ಸಾವಿತ್ರಿಗೆ ಆಶ್ಚರ್ಯವಾಯಿತು. ಬಹಳ ಆಶ್ಚರ್ಯವಾಯಿತು. ಅಣ್ಣನನ್ನು ಇಷ್ಟು ಉತ್ಸಾಹದಿಂದ ತುಂಬುವಂತೆ ಬರೆದಿರುವಳಾದರೂ ಏನ! ತನ್ನ ಅತ್ತಿಗೆಯು ಶಾಲೆಗೆ ಒಂದುದಿನವೂ ಕೂಡ ಚನ್ನಾಗಿ ಹೋಗಿ ಬಂದವಳಲ್ಲ. ಹಳ್ಳಿಯ ಹುಡುಗಿ! ಸಾಧಾರಣೆಯ ಕಂಪನ್ನು ಸ್ವಲ್ಪೂ ಕಂಡವಳಲ್ಲ. ಇಂಥವಳು ಏನು ಬರೆದಿರು ವಳೋ? ಬರೆಯಲಿಕ್ಕಾದರೂ ಅವಳಿಗೆ ಬರುವದೋ. ನೋಡೇ ಬಿಡಬೇಕೆಂದು ನಿಶ್ಚಯಿಸಿದಳು. ಅಣ್ಣನ ಕೋಣೆಯನ್ನು ಹೊಕ್ಕಳು. ಅಣ್ಣನು ಇನ್ನು ತಾಸಿನವರೆಗೆ ಬರುವದಿಲ್ಲನೆಂದು ಅವಳಿಗೆ ಗೊತ್ತು. ಅವನ ಕೋಣೆಯನ್ನು ಪ್ರವೇಶಿಸುವಾಗ ಕಾಲ್ಗಳು ನಡುಗಿಸಿದವು. ಎದೆಯು 'ಡಬಡಬ' ಬಡಿದು ಕೊಳ್ಳ ಹತ್ತಿತು. ಆದರೂ ಎದೆಗುಂದದೆ ಅವನ ಕೋಟಿನ ಕಿಸೆಗಳನ್ನು ಹುಡುಕಿದಳು. ಪತ್ರವು ಒಳಕಿಸೆಯಲ್ಲಿತ್ತು ಹೊರಗೆ ತೆಗೆದಳು. ಕೈ ನಡುಗಿತು ಮನ ನಡುಗಿತು. ಮೈ ಬೆವತಿತು. ಅದನ್ನು ಬಿಚ್ಚಿದಳು. ಓದಬೇಕೆಂದು ಕಣ್ಣಗಳಿಗೆ ಆಜ್ಞೆ ವಿಧಿಸಿದಳು.

ಪತಿ ಪತ್ನಿಯರ ಏಕಾಂತ ಪತ್ರಗಳನ್ನು ಓದುವದು ಸುಶಿಕ್ಷಿತರ ಲಕ್ಷಣವಲ್ಲ. ತಾನು ಪತ್ರ ತೆಗೆದದ್ದು ಯೋಗ್ಯವಲ್ಲ. ಆದರೆ ತಾನೇನು ಕುತ್ಸಿತ ಬುದ್ಧಿಯಿಂದ ಇದನ್ನು ತೆರೆದಿರುವಳೇ ಎಂದುಕೊಂಡಳು ಸಾವಿತ್ರಿ. ಕೇವಲ ಉತ್ಸುಕತೆಯಿಂದ ತಾನು ಓದುವಳು. ಅತ್ತಿಗೆಯು ಸರಳ ಸ್ವಭಾವದ ಹುಡುಗಿ ಪತಿಯ ಮುಂದೆ ತನ್ನ ಮನವನ್ನು ಬಿಚ್ಚಿದ್ದಾಳೆ. ತಾನು ಸರಳ ಸ್ವಭಾವದಿಂದ ಓದಬೇಕೆಂದಳು. ಸಾವಿತ್ರಿಯು ಪತ್ರವನ್ನು ಬಿಚ್ಚಿದಳು. ಮತ್ತೊಮ್ಮೆ ಓದಿದಳು. ಇನ್ನೊಮ್ಮೆ ಓದಿದಳು.

ಪತಿ ದೇವರ ಪಾದಗಳಿಗೆ ಈ ದಾಸಿಯು ಮಾಡುವ ನಮಸ್ಕಾರಗಳು. ನನ್ನನ್ನು ಬಿಟ್ಟು ಹೋಗಿರುವಿ. ತಾಯಿ ತಂದೆ ಅಣ್ಣ ತಮ್ಮ ಅಕ್ಕ ತಂಗಿ ಯಾರಲ್ಲಿ ಬೆರತಿರುವಿ" ಎಂದು ಬರೆದಿರುವಿ. ಆದರೆ ನನಗೆ ಯಾರು ಬೇಕೋ ಅವರಾದ ನೀವು ಇಲ್ಲಿ ಇಲ್ಲದ್ದರಿಂದ ಯಾರಿದ್ದರೂ ನನಗೆ ಭಣ ಭಣ. ಬೇಗ ಉತ್ತರ ಬರೀರಿ. ನಿಮ್ಮ ಚರಣದಾಸಿ.

ಮುಗಿಯಿತು ಪತ್ರ. ಸಾವಿತ್ರಿಯ ಮನಸ್ಸು ಕರಗಿ ನೀರಾಗಿ ಹೋಯಿತು. ಹೆಣ್ಣಿನ ಹೃದಯದ ಆಳವು ಶಿಕ್ಷಣ ಸಾಧಾರಣಗಳಿಂದ ಎಣಿಸುವದು ತಪ್ಪು ಎಂದುಕೊಂಡಳು. ಅತ್ತಿಗೆಯ ಬಗ್ಗೆ ಭಕ್ತಿ ಭಾವನೆಗಳು ಸಾವಿತ್ರಿಯಲ್ಲಿ ಸ್ಥಿರವಾದವು.

ಈಗ ಸಾವಿತ್ರಿಗೆ ನೆನಪಾಯಿತು ತಾನು ತೌರುಮನೆಗೆಂದ ಬಂದಾಗ 'ರಾಯರ' ಪರಿಸ್ಥಿತಿ ನೆನೆದಳು. ಛೆ ಛೆ, ತಾಯಿ ಅಣ್ಣಂದಿರು "ಬಾ" ಎಂದು ಬರೆದರೂ ತಾನೂ ತೌರುಮನೆಗೆ ಬರಬಾರದೆಂದು ನಿಶ್ಚಯಿಸಿದಳು; ಈ ನಿಶ್ಚಯವನ್ನು ತನ್ನ "ರಾಯನಿಗೆ" ತಿಳಿಸಿದರೆ ಅವನೆಷ್ಟು ಸಂತೋಷ ಭರಿತನಾಗುವನು. ತಾನು ಅವನ ಹೃದಯದಲ್ಲಿ ಸ್ಥಿರವಾಗಿ ಉಳಿಯುವಳು. ರಾಯನು ಓಡಿ ಬಂದು ತನ್ನನ್ನು ಎದೆಗವಚಿಕೊಳ್ಳುವನು. 'ಸಾವಿತ್ರೀ ನೀನೊಂದು ನನ್ನ ಹೃದಯದ ರತ್ನ ಅನ್ನುವನು"

"ರತ್ನ"........ ಸಾವಿತ್ರಿಯು ಕಸೂತಿಯ ದಾರ ಸೂಜಿಗಳನ್ನು ಕೆಳಗಿಟ್ಟಳು. ತಾನು ರತ್ನವೇ, ತನ್ನ ಬಗ್ಗೆ ಜನರು ಅನ್ನುವದು ಅವಳಿಗೆ ನೆನಪಾಯಿತು. "ಕೆಲಸವಿಲ್ಲದೇ ಮನೆ ಹಿಡಿದ ಚಿಟ್ಟಾನೆ" ಎಂದು ಇನ್ನೂ ಅವಳ ಕಿವಿಯಲ್ಲಿ ಯಾರೊ ಅನ್ನುತ್ತಿರುವದು ಕೇಳುವದು. ಎರಡೂ ಕಿವಿಗಳನ್ನು ಮುಚ್ಚಿಕೊಂಡಳು. ಎದ್ದು ನಿಂತಳು. ಇತ್ತ ಬಂದಳು. ಎದುರಿಗೆ ನಿಲುಗನ್ನಡಿ.

ಮನುಜನನ್ನು ಮಾಯೆಯಲ್ಲಿ ಕೆಡುಹಿ ಅವನನ್ನು ಭ್ರಮಿಸುವದು ಧನಕನಕ, ಮಡದಿ ಮಕ್ಕಳು, ಕನ್ನಡಿಯು ಇವಕ್ಕಿಂತಲೂ ಪ್ರಬಲವಾದ ಬಿರುಗಾಳಿ. ಅದರ ಮುಂದೆ ನಿಂತಾಗ ಎಂಥವರಿಗೂ ಅನಿಸುವದು, ತಾನೊಂದು ಸುಂದರವಾದ ಪ್ರಾಣಿಯೆಂದು.

೧೨ನೆ ವಯಸ್ಸಿನ ತಾರುಣ್ಯದೆಲೆಗಳಲಿ ತೇಲಾಡುವ ಐಷಾರಾಮಿ ಜೀವಿ ಸಾವಿತ್ರಿಯು ಕೂಡ ತಾನು ಸುಂದರಳಾಗಿರುವಳೆಂದು ಭಾವಿಸಿದರೆ ಏನಾಶ್ಚರ್ಯ! ಸಾವಿತ್ರಿಯು ಕನ್ನಡಿಯ ಮುಂದೆ ನಿಂತಿದ್ದಾಳೆ. ತನ್ನ ವಿವಿಧಾಂಗಗಳನ್ನು ಕಣ್ಣು ತುಂಬ ನೋಡುತ್ತಿದ್ದಾಳೆ. ಎತ್ತರಕ್ಕೆ ತಕ್ಕಷ್ಟು ದೇಹದ ಅಂಗಗಳು ಪುಷ್ಟಿಗೊಂಡಿವೆ. ತೋಳುಗಳು ದುಂಡಾಗಿ ಸಬಲಾಗಿ ಮನೋಹರವಾಗಿವೆ. ಅವುಗಳಿಗೆ ಕೀರ-ಮೇಲ್ಗಡೆಗೆ ಸುತ್ತಿಕೊಂಡ ಪೋಲ ಕದ ಅಂಚು ವಿಲಕ್ಷಣ ಕಾಂತಿಯನ್ನು ಕೊಡುತ್ತಿದೆ ದುಂಡನ್ನ ಮೊಗ ಉಬ್ಬಿದ ಗಲ್ಲಗಳು, ಚಂಚಲ ಕಣ್ಣುಗಳು, ಮೊಂಡಮೂಗು, ನಗೆನಲಿ ಯುವ ಕೆಂಪನ್ನ ತುಟಿಗಳು. ನಯವಾದ ಗದ್ದ, ಅಗಲವಾದ ಹಣೆ, ಎಡ ಗಡೆಗೆ ಬೈತಲು ಇಟ್ಟುಕೊಂಡಕರೀಕೂದಲು ಆ ಹಣೆಗೆ ಅಂಟಿನಂತೆ ಸುತ್ತಿ ಕಿವಿಗಳನ್ನು ಅರ್ಧ ಮುಚ್ಚಿವೆ. ಕಿವಿಗಳಲ್ಲಿ ವಜ್ರದ ಬೆಂಡೋಲೆ ಗಳಿವೆ ಅವುಗಳಿಗೆ ತೂಗುಬಿದ್ದ ಲೋಲಕದಿಂದ ಹೊರಟ ಬೆಳಕು. ನಸು ಕಪ್ಪಾದ ಉಬ್ಬಿದ ಗಲ್ಲಗಳ ಮೇಲೆ ಬಿದ್ದು ಮೋಹಕತೆಯನ್ನುಂಟುಮಾಡಿವೆ. ಆ ಮುಖದ ಸೌಂದರ್ಯವನ್ನು ನೋಡಬೇಕು. ಎದೆಯ ಮೇಲಿನ ಸೆರಗು ಅರ್ಧ ಸರಿದಿದೆ. ಸಾವಿತ್ರಿಯು ಸೆರಗನ್ನು ಪೂರ್ತಿ ತೆಗೆದುಕೊಂಡಳು ಪೂರ್ಣ ಬೆಳವಣಿಗೆಯನ್ನು ಹೊಂದಿದ ಸ್ತನಯುಗ್ಮಗಳು ಸಾಹಿತಿಯ ಉನ್ಮತ್ತ ದೃಷ್ಟಿಗೆ ಕಾಮನ ಸೆಳೆದಾಟದ ವೈಯಾರವೆಂದು ಕಂಡರೂ ತಾಯ ನವನ್ನು ಹೊಂದುವ ಪೂರ್ಣ ಯೋಗ್ಯತೆಯನ್ನು ಬೀರುವವು.

ಸಾವಿತ್ರಿಯು ನನ್ನ ಕೈಗಳಿಂದ ತನ್ನ ರಟ್ಟೆಗಳನ್ನು ಹಿಡಿದಳು. ಮೆಲ್ಲಗೆ ಹಿಚಿಕಿದಳು. ಬೆರಳುಗಳು ರಟ್ಟೆಯ ಒಳಗೇ ಹೋದವೇನೋ ... ಅಷ್ಟು ಮೆತ್ತಗಾಗಿವೆ. ಸಾವಿತ್ರಿಯ ನಕ್ಕಳು. ಸಹಜವಾಗಿ ಗಲ್ಲಗಳಲ್ಲಿ ತೆಗ್ಗು ಬಿದ್ದು ಅಲ್ಲಿಗೆ ಕಿವಿಲೋಲಕದ ಕಿರಣಗಳು ಬಂದು ಬಿದ್ದವು. ಹಲ್ಲು ಗಳ ಸಾಲು ಮುತ್ತಿನ ಸರವೋ ಎನಿಸಿತು. ತನ್ನ ತೋಳ್ಗಗಳಿಂದ ತನ್ನನ್ನು ತಾನೇ ಅಪ್ಪಿಕೊಂಡಳು. ತಲ್ಲೀನಳಾದಳು. ಅರೆಗಣ್ಣಿನಿಂದ ತನ್ನನ್ನು ಕನ್ನ ಡಿಯಲ್ಲಿ ತಾನೇ ಕಂಡಳು. ಹಾ ! ಎಂಥ ಸುಖವಾದ ಸ್ಪರ್ಶವಿದು !

ರಾಯರು 'ತನ್ನನ್ನು ತಮ್ಮ ಹೃದಯದ ರತ್ನ' ಅನ್ನುವದೇನು ಸುಳ್ಳಲ್ಲ. ಸಾವಿತ್ರಿಯು ಪೂರ್ಣ ನಂಬಿದಳು. ತಾನು ನಿಜವಾಗಿಯೂ

ರತ್ನ. ಒಂದು ಅಮೂಲ್ಯವಾದ ಸ್ತ್ರೀರತ್ನ. ಅದನ್ನ ಪಡೆದವನೇ ಪುಣ್ಯವಂತ ತನ್ನ 'ರಾಯನ' ಅಂಥವನು. ಅದೇನೇ ಇರಲಿ. ಜನರು ಅರಿಕೊಳ್ಳುವದಿಲ್ಲವೂ ಕೇವಲ ಆಡಿಕೆಯ ಮಾತು. ತೀರಸಳ್ಳು.

ಸಾವಿತ್ರಿಗೆ ಇಂದು ನಿಜವಾಗಿಯೂ ಜ್ಞಾನೋದಯವಾಯಿತು. ಪುಸ್ತಕದಲ್ಲಿ ಓದಿದ್ದು ಸುಳ್ಳೆಂದಳು. ತಾನು ಸೂಕ್ಷ್ಮ ದೃಷ್ಟಿಯಿಂದ ತನ್ನ ಸುತ್ತಲಿನದನ್ನೇ ನೋಡಬೇಕು. ವಿಮರ್ಶಕ ದೃಷ್ಟಿಯಿಂದ ನೋಡಬೇಕು ಸದಸದ್ವಿವೇಕದವರೆಗೆ ಹಚ್ಚಬೇಕು. ವಿಚಾರವನ್ನು ತೂಗಿ ತಿಳಿದುಕೊಳ್ಳಬೇಕು. ಅಲ್ಲಿಯೇ ಸತ್ಯವಿದೆ. ಅಲ್ಲಿಯೇ ಸುಖವಿದೆ

ಅಂಥ ಸತ್ಯ ಸುಖಗಳನ್ನು ಪಡೆಯಲು ಸಾವಿತ್ರಿಯು ಹವಣಿಸುವಳು ಆ ಸುಖ ದೊರಕಿಸಲು ಸಮಾಜಕ್ಕೆ ಉಪದೇಶಿಸುವಳು. ತಾನು ಹೊಂದಿದ ಸುಖವನ್ನು ತನ್ನ ಮಕ್ಕಳಿಗೆ ತನ್ನ ಪತಿಗೆ ನೀಡುವೆನೆಂದಳು ತನಗೆ ಸುಖವಾದರೆ ಪತಿಗೆ ಸುಖ. ಅವನು ಸುಖಿಸಿದರೆ ತನಗೆ ಆನಂದ. ಅದೇಕೆ ತನಗೆ ಕಷ್ಟವಾದರೂ ಆಗಲಿ, 'ರಾಯರು' ಮಾತ್ರ ಸುಖದಿಂದಿರಬೇಕು. ತನ್ನ ಮಕ್ಕಳ ಪೋಷಣೆಗಾಗಿ ಜಗದಲ್ಲಿ ದುಡಿದು ದುಡಿದು ಸವೆಯುವರು. 'ರಾಯರು' ಕಚೇರಿಯಲ್ಲಿ ಮೇಲಧಿಕಾರಿಗಳು ಅವಮಾನ ಮಾಡಿದರೆ ಸಹಿಸುವರು. ಯುಕ್ತಿ ಪ್ರಯುಕ್ತಿಗಳಿಂದ ಜೀವನ ಹೋರಾಟಕ್ಕೆ ದುಡ್ಡು ಗಳಿಸುವರು: ಅಂಥವರು ಮನೆಗೆ ಬಂದರೆ ಮನೆಯಲ್ಲಿ ಅವರಿಗೆ ಪುರಸ್ಕಾರ ಬೇಡವೇ, ಆದರ ಆರೈಕೆಗಳು ಬೇಡವೇ, ಇವುಗಳೂ ಇಲ್ಲದಿದ್ದರೆ ಪುರುಷನು ಬದುಕುವದೆಂತು.

ಹೆಂಗಸಿಗೆ ಗಂಡಸಿನಷ್ಟು ಕಷ್ಟಗಳಿಲ್ಲವೆಂದು ಸಾವಿತ್ರಿಯು ಅಂದುಕೊಂಡಳು. ಮನೆಗೆಲಸ, ಪತಿ ಮತ್ತು ಮಕ್ಕಳ ಆರೈಕೆಯಾದರೆ ತೀರಿತು. ನಿಜದೈಹಿಕಶ್ರಮವಿದೆ. ಆದರೆ ಶಕ್ತಿವರ್ಧಕ ಆಹಾರ ತೆಗೆದುಕೊಂಡರೆ ಪ್ರಕೃತಿ ಸುಧಾರಿಸಿ ಬಿಡುವದು. ಪುರುಷ ಹಾಗಲ್ಲ ದೈಹಿಕಶ್ರಮದಕಿಂತ ಬೌದ್ಧಿಕ ಶ್ರಮ ಅವನಿಗೆ ಹೆಚ್ಚಿದೆ. ತಾನು ಗಳಿಸಿದ್ದು ಸಂಸ್ಕಾರಕ್ಕೆ ಸಾಲದಿದ್ದರೆ ತನ್ನ ಮುಂದೆ ಪತ್ನಿ ಮಕ್ಕಳು ಸಣ್ಣ ಮೋರೆ ಮಾಡಿದರೆ ಪುರುಷನು ಅರ್ಧ ಸವೆದು ಹೋಗುವನು.

ಪುರುಷನಲ್ಲಿ ದುಡ್ಡಿದೆ. ಆ ದುಡ್ಡಿನಲ್ಲಿ ಶ್ರಮಪರಿಹಾರಕ್ಕೆ ತುಸು ಅವನು ವೆಚ್ಚಮಾಡಬಹುದು. ಚಹ-ಕುಡಿಯುವನು. ಸಿನೆಮಾಕ್ಕೆ ಹೋಗುವನು. ಸಿಗರೇಟು ಸೇದುವನು.........

ಛೆ ! ಚಹ ಕುಡಿಯುವದು, ಸಿಗರೇಟು, ಸೇದುವದು ಬಹಳ ಕೆಟ್ಟ ಚಟಗಳು. ಅವು ದೇಹವನ್ನು ಸವೆಸಿಬಿಡುವವು. ತಂದೆಯು ಸಿಗರೇಟು ಬಹಳ ಸೇದುತ್ತಿದ್ದನು. ಚಹವನ್ನು ದಿನಾಲು ೬ ಸಾರೆ ಕುಡಿಯುತ್ತಿದ್ದನು: ಆದುದರಿಂದಲೇ ಅವನು ಬೇಗ ತೀರಿದನು.

ಸಾವಿತ್ರಿಯ ಗಂಟಲು ಉಬ್ಬಿಬಂದಿತು ಕಣ್ಣಳಿಂದ ಪಟಪಟನೇ ನೀರು ಉದುರಿದವು. ತಾನೇನಾದರೂ ಜೀವನದಲ್ಲಿ ಮಾಡುವದಿದ್ದರೆ ಇದೊಂದನ್ನು ಮಾಡಬೇಕೆಂದು ಸಾವಿತ್ರಿಯ ನಿಶ್ಚಯಿಸಿದಳು. 'ರಾಯರು" ಸಿಗರೇಟು ಚಹದ ಸನಿಯಕ್ಕೆ ಕೂಡ ಹೋಗದಂತೆ ನೋಡಿಕೊಳ್ಳುವದು. ಒಂದು ವೇಳೆ ಅವರೂ ತನ್ನ ಮುಂದೆ ತೀರಿ.........ಬೇಡ. ಬೇಡ. ಒಳಿತು. ಒಳಿತು" ಎಂದುಕೊಂಡಳು ಸಾವಿತ್ರಿ.

ಮನಕ್ಕೆ ಯಾವುದು ಬೇಡವೋ ಅದು ಬಂದೇ ಬಿಡುವದು. ನಾವು ಯಾವುದನ್ನು ಮರೆಯಲು ಯತ್ನಿಸುವೆವೋ ಅದು ಹಠಾತ್ತಾಗಿ ನೆನಪಾಗುವದು. ಇದು ಸೃಷ್ಟಿಯ ನಿಯಮ. ಸಾವಿತ್ರಿಗೆ ಮನದಲ್ಲಿ ಮತ್ತೆ ಮತ್ತೆ ಅದೇ ವಿಚಾರ "ರಾಯರು ತೀರಿದರೆ" ಥೂ ಎಂಥ ಕೆಟ್ಟ ವಿಚಾರವಿದು........ ಕಸೂತಿಯ ಕೆಲಸ ಭರದಿಂದ ಸಾಗಿತು. ಕಣ್ಣುಗಳು ಏಕಾಗ್ರತೆಯನ್ನು ಹೊಂದಿದವು. ಮನವು ಬೇರೆ ವಿಷಯವು ಹುಡುಕಲು ಎಲ್ಲೆಲ್ಲಿಯೋ ಅಲೆದಾಡಿತು. ಸುತ್ತಾಡಿತು. "ರಾಯರು ತೀರಿದರೆ" ಸಾವಿತ್ರಿಯು ಏಕಾಕಿಯಾಗುವಳು. ಆ ಮೇಲೆ.... ಆ ಮೇಲೇನು?

ಸಾವಿತ್ರಿಗೆ ತನ್ನ ತಾಯಿಯ ನೆನಪಾಯಿತು. ತನ್ನ ತಾಯಿಯಂತೆ ತಾನೂ ಇರಬೇಕಾಗುವದು. ತಂದೆ ಇರುವಾಗ ತಾಯಿಯ ಇರುವೇನು ! ಈಗಿನ ಅವಳ ಬಾಳೇನು ? ಎಲ್ಲವೂ ಪೂರ್ವ ಪಶ್ಚಿಮ. ಆಗ ತಾಯಿಯ ದರ್ಪವೇದರ್ಪ. ಈಗ ಮೆತ್ತಗೆ ಸಾಕಿದ ಬೆಕ್ಕಿನಂತಿದ್ದಾಳೆ. ಆಗ ಅವಳು ವೇಷಭೂಷಗಳ ಕಡೆಗೆ ಬಹಳ ಲಕ್ಷ್ಯ ಕೊಡುತ್ತಿದ್ದಳು. ಈಗ ತೀರು

ಕಡಿಮೆ ಕಿಮ್ಮತ್ತಿನ ಶೀರೆಯನ್ನುಡುವಳು. ಆಗೆ ಆಭರಣಗಳನ್ನು ಯಾವಾಗಲೂ ಇಡುತ್ತಿದ್ದಳು. ಈಗ ಅವಳ ಮೈಮೇಲೆ ಗುಂಜಿತೂಕ ಬಂಗಾರ ಕೂಡ ಇಲ್ಲ. ಅವಳ ನಾಲಿಗೆಯ ಚಪಲ, ಅಧಿಕಾರ ಲಾಲಿಸೆ, ನಾಲ್ಕು ಜನರಲ್ಲಿ ಬೆರೆತು ಮೆರೆಯುವ ಪ್ರವೃತ್ತಿಗಳು ತಂದೆ ಹೋದ ದಿನವೇ ಮಾಯವಾಗಿವೆ. ತಾಯಿಯು ಯಾರಿಗಾದರೂ ಮೋರೆ ತೋರುವದು ಸಹ ವಿರಳ. ಮನೆಯ ಸರ್ವಾಧಿಕಾರವನ್ನು ಅತ್ತಿಗೆಗೆ ಒಪ್ಪಿಸಿಬಿಟ್ಟಿದ್ದಾಳೆ. ಮನೆಯ ಯಾವ ಕಾರ್ಯಭಾರದಲ್ಲಿಯೂ ಎಷ್ಟೂ ತನ್ನ ಅಭಿಲಾಷೆಯನ್ನಾಗಲೀ, ಅಧಿಕಾರವನ್ನಾಗಲೀ, ತೋರುವದಿಲ್ಲ. ಮುಖವು ಬಾಡಿದೆ. ಕಣ್ಗಳ ತೇಜವು ಮಂದಾಗಿದೆ. ಗಲ್ಲಗಳು ಬತ್ತಿವೆ. ನಗೆನಲಿಯುವ ತುಟಿಗಳು ಕಪ್ಪಿಟ್ಟವೆ. ಎಲ್ಲಿ ಹೋಯಿತು ಅವಳ ಉತ್ಸಾಹ! "ಅವ್ವಾ ಹಿಂಗ್ಯಾಕ?" ಅಂದರೆ "ಇನ್ನ ಮುಂದನಾ ಹೀಂಗೇನವ್ವಾ" ಅನ್ನುವಳು. "ಅವರು ಹೋದಮ್ಯಾಲೆ ನಾನೂ ಹೋದಾಂಗ ಎಮದೇವರ ಹಾದೀ ನೋಡ್ಲಿಕ್ಕೆ ಹತ್ತೀನಿ. ಕರೀಲಿಕ್ಕೆ ಬರ್ಽ ವಲ್ಲ." ಎಂದು ಕಣ್ಣೀರ ಕೋಡಿಯನ್ನು ಹರಿಸುವಳು. ಹಬ್ಬ ಹುಟ್ಟಿಮೆಗಳಲ್ಲಿ ಅವ್ವನು ಮನೆಯಲ್ಲಿ ಇರುವದೇ ಇಲ್ಲ. ನೆರೆಹಳ್ಳಿಯ ಹನಮಂತ ದೇವರ ಗುಡಿಗೆ ಹೋಗಿ ಬಿಡುವಳು ಅಲ್ಲಿ ದೇವರ ಧ್ಯಾನದಲ್ಲಿ ನಿರತಳಾಗಿ ಪೂಜಾರಿಯು ಏನಾದರೂ ಕೊಟ್ಟರೆ ತಿಂದು ಆ ದಿನ ಕಳೆಯುವಳು. ಇಲ್ಲದಿದ್ದರೆ ಆ ದಿನ ಉಪವಾಸದಿಂದಿರುವಳು. ಇದನ್ನು ತಿಳಿದು ಅಣ್ಣನು ಆ ಪೂಜಾರಿಗೆ ಹೇಳಿ ಅವ್ವನು ಬಂದಾಗೊಮ್ಮೆ ಅವಳ ಯೋಗ್ಯ ಸಮಾಚಾರ ತೆಗೆದುಕೊಳ್ಳಲು ಸೂಚಿಸಿದ್ದಾನೆ. ಆ ಬಗ್ಗೆ ಸಂಭಾವನೆಯನ್ನು ಆಚಾರ್ಯರಿಗೆ ಸಲ್ಲಿಸುತ್ತಿದ್ದಾನೆ.

'ರಾಯರು ತನಗಿಂತ ಮೊದಲು ತೀರಿದರೆ?....ಥೂ ಮತ್ತೆ ಅದೇ ವಿಚಾರ. .... ತಾನು ಒಂದು ದಿನ ಕೂಡ ಜೀವದಿಂದರಲು ಶಕ್ಯವಿಲ್ಲವೆಂದು ನಿಶ್ಚಯಿಸಿದಳು ಸಾವಿತ್ರಿಯು. ತಾನು ಅನಾಯಾಸವಾಗಿ ಸಾವಿತ್ರಿಯಾಗಿದ್ದಾಳೆ. ಎಮದೂತನ ಬೆನ್ನುಹತ್ತಿ ಪತಿದೇವನ ಜೀವವನ್ನು ತಿರುಗಿ ತರುವೆನೆಂದು ಅಂದುಬಿಟ್ಟಳು. ಮರುಕ್ಷಣಕ್ಕೆ ಇದು ಸಾಧ್ಯವೇ ಎಂದೆಂದುಕೊಂಡಳು. ಹೋಗಲಿ ಬಾಣ ಮಹಾಕವಿಯು ಹೇಳಿದಂತೆ ತಾನು

ತನ್ನ ಪತಿಯ ದೇಹವನ್ನು ಕಾಯ್ದಿಡುವಳು. ಜೀವ ವಾಪಸು ಬರುವ ವರೆಗೆ ದೇಹವನ್ನಿಡಲು ಸಾಧ್ಯವಿಲ್ಲ. ಅವನ ಭಾವಚಿತ್ರವನ್ನು ದೇವರಂತೆ ಜಗುಲಿಯ ಮೇಲಿರಿಸಿ ಪೂಜೆ ಮಾಡಬೇಕೆಂದು ನಿಶ್ಚಯಿಸಿದಳು. ಇದು ಮಹಾಪತಿವ್ರತೆಯರಲಕ್ಷಣ, ಹಾಗೆ ಮಾಡಬೇಕು. ಇರಬೇಕು.

ಇರಬೇಕು ? ಹೇಗೆ? ತಾನು ಎಂಟು ದಿನಗಳ ಮಟ್ಟಿಗೆ ಮಾತ್ರ ತೌರೂರಿಗೆ ಹೋದರೆ ಇರಲಾಗದ ಪತಿಯು ಹೋದರೆ, ತಾನು ಮಾತ್ರ ಇರಬೇಕೆ ? ಹಾಗಾದರೆ ಇದೇನು ಅಪಶಕುನವೋ ! ಕೆಟ್ಟ ಕೆಟ್ಟ ವಿಚಾರಗಳೇ ತುಂಬಿದವಲ್ಲ ತಲೆಯಲ್ಲಿ ! 'ಸ್ವಾಮೀ, ನಾನು ಮೊದಲು ಹೋಗುವೆನು' ಎಂದಳು ಸಾವಿತ್ರಿ. 'ಆ ಮೇಲೆ ನೀವು' ದೇವರು ನನ್ನ ಆಯುಷ್ಯದ ಅರ್ಧವನ್ನು ನಿಮಗೆ ಈಯಲಿ. ಏಕಾಕಿಯಾಗಿ ನಾನು ಇರಲಾರೆ. ಹಾಗೆ ಇರಲು ತಾಯಿಯೇ ಗಟ್ಟಿ; ಅವಳೇ ಎದೆಗಾತಿ" ಸಾವಿತ್ರಿಯ ಕಣ್ಣಗಳಿಂದ, ಧಾರೆ ಧಾರೆಯಾಗಿ ನೀರು ಬೀಳತೊಡಗಿದವು. ಸಾವಿತ್ರಿಯು ತನ್ನ ಮನಕ್ಕೆ ಹೇಳಿದಳು "ಅಳು, ಇನಿಷ್ಟು ಅಳು. ಶಕ್ಯವಿದ್ದಷ್ಟು ಅತ್ತು ಒಮ್ಮೆ ಅಳುವನ್ನು ತೀರಿಸಿಬಿಡು. ವಿವಾಹವಾದ ಮೇಲೆ ಈ ಅಳು ಬೇಡ'' ಎಂದು ಸಾವಿತ್ರಿಯು ಬಹಳ ಅತ್ತಳು. ಬಹಳ ಹೊತ್ತಿನ ಮೇಲೆ ಸಾವರಿಸಿಕೊಂಡಳು. ತಾನು ಅತ್ತದ್ದೇಕೆ ! ಎಂಥ ಹುಚ್ಚುಹುಡುಗಿ ತಾನು ಎಂದುಕೊಂಡಳು. ಸಾವಿತ್ರಿಗೆ ಇನ್ನೂ 'ನಿಶ್ಚಯ'ವಾಗಿಲ್ಲ. ಅವಳು ಗಂಡನ ಮನೆಗೆ ಹೋಗಿಲ್ಲ.ಅವನ ಕೂಡ ಸಂಸಾರ ಸಾಗರದಲ್ಲಿ ತೇಲಲಿಲ್ಲ. ಇನ್ನೂ ಏನೂ ಇಲ್ಲ. ಈಗ ಅವನು ಸತ್ತರೆ ಹೇಗೆ ಎಂಬುದನ್ನು ನೆನೆದು ಅಳಬೇಕೆ ? ಹೆಣ್ಣಿನ ಹೃದಯವು ಎಷ್ಟು ಮಿದುವು. ಮುಟ್ಟಿದರೆ ಬಾಡುವದೋ ಎಂಬ ಭೀತಿ. ಅಷ್ಟೇ ಭಾವನಾಮಯವಾದದ್ದು. ಭಾವನೆಯ ಬಿರುಗಾಳಿಗೆ ಸಿಲುಕಿ ಸುಮ್ಮನೆ ಹೊಯ್ದಾಡಿ ಬೆಂಡಾಗಿ ಹೋಯಿತು.

ಹೊರಗಿನ "ಗಿಲ್ಲ ಗಿಲ್ಲ'' ಎಂಬ ಟಾಂಗಾದ ಕುದುರಿಯ ಸಪ್ಪಳ ವಾಗಿ ತಮ್ಮ ಮನೆಯ ಮುಂದೆ ನಿಂತಿತು. "ಅಣ್ಣ ಅವ್ವ ಬಂದ ಬಿಟ್ರೋ" ಎಂದು ಮನದಲ್ಲಿ ಅಂದುಕೊಂಡು ಗಡಿಯಾರ ನೋಡಿದಳು

೭॥ ಆಗಿತ್ತು. "ಗಾಡೀ ಅಂತು ಬಂತು, ಇರಬೇಕು" ಎಂದು ಧಾವಿಸಿದಳು. ನಿಜ ಅಣ್ಣ ಅವ್ವ ಊರಿಂದ ಬಂದರು. ಅವರನ್ನು ಎದುರುಗೊಳ್ಳಲು ಅತ್ತಿಗೆಯು ಈಗಾಗಲೇ ತರಬಾಗಿಲಿಗೆ ಹೋಗಿ ನಿಂತಿದ್ದಾಳೆ. ಸಾವಿತ್ರಿಯೂ ಹೋಗಿ ನಿಂತಳು.

ಅಣ್ಣನು ಟಾಂಗಾದಿಂದ ಇಳಿದನು. ಅತ್ತಿಗೆಯನ್ನು ನೋಡಿದನು. ಉಲ್ಹಾಸವನ್ನಾಗಲೀ ಮುಗುಳುನಗೆಯನ್ನಾಗಲೀ ತೋರಲಿಲ್ಲ. ಸಾವಿತ್ರಿಯ ಮೋರೆಯನ್ನು ನೋಡಿದನು. ಅಣ್ಣನ ಮುಖ ಬಾಡಿತು. ಕೆಳಗಾಯಿತು. ಸಾವಿತ್ರಿಯ ಮುಖವೂ ಬಾಡಿತು. ಎದೆಯು ಹಾರತೊಡಗಿತು. ಅವ್ವನು ಇಳಿದಳು. ಮೆಲ್ಲಗೆ ಮನೆಯೊಳಗೆ ಹೋಗಿಬಿಟ್ಟಳು. ಬಾಗಿಲಲ್ಲಿ ನಿಂತ ಸೊಸೆಯನ್ನಾಗಲೀ ಮಗಳನ್ನಾಗಲೀ ಕಣ್ಣೆತ್ತಿ ಕೂಡ ನೋಡಲಿಲ್ಲ. ಸೊಸೆಯು ಅತ್ತೆಯನ್ನು ಹಿಂಬಾಲಿಸಿದಳು. ಟಾಂಗಾದವನು ಹಾಸಿಗೆಯ ಸುರುಳಿಯನ್ನು ಮನೆಯಲ್ಲಿಟ್ಟು ಬಾಡಿಗೆ ತೆಗೆದುಕೊಂಡು ಹೊರಟುಹೋದನು. ಅಣ್ಣನು ತನ್ನ ಕೋಣೆಗೆ ಹೋದನು.

ಮನೆಯಲ್ಲವೂ ಶಾಂತವಾಯಿತು. ರುದ್ರಶಾಂತಿ ಎಲ್ಲರ ಹೃದಯಗಳು ಸುಡುತ್ತಿದ್ದರೂ ಶಾಂತಿಯ ಆವರಣವು ಬಹಳ ಭದ್ರವಾಗಿದೆ.

ಸಾವಿತ್ರಿಯು ತನ್ನ ಕೋಣೆಗೆ ಓಡಿದಳು. ಹಾಸಿಗೆಯ ಮೇಲೆ ಬಿದ್ದು ಅಳಹತ್ತಿದಳು. ಸಣ್ಣ ಹುಡುಗಿಯಂತೆ ಅತ್ತಳು. ಭೋರಿಟ್ಟು ಅತ್ತಳು.

**ಮುಗಿದುದು**